# ಷನ್ಮೂಲಗಳು ಮತ್ತು ಕೈಗಾರಿಕಾವಕಾಶಗಳು

## ಬಿಜಾಪುರ ಜಿಲ್ಲೆ

ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ರ್ಮಿಕವಾಗಿಯೂ ಸಾಮಾಜಿಕವಾಗಿಯೂ, ಮಹಾಕ್ರಾಂತಿ ೊಂದು ನಡೆಯಿತು. ಈ ಕ್ರಾಂತಿಯ ನೇತಾರ ಪ್ರಸಿದ್ಧ ಶಿವ ಣ, ವಚನಕಾರ, ಮಂತ್ರಿ, ಸಮಾಜಸುಧಾರಕ ಜಗಜ್ಯೋತಿ ಸವೇಶ್ವರ. ಎಲ್ಲರಿಗೂ ತಿಳಿದಿರುವುದು ಬಸವಣ್ಣ ಎಂಬ ಹೆಸರಿನ ೂಲಕವೇ. ಬಿಜಾಪುರ ಜಿಲ್ಲೆಯ ಬಾಗೇವಾಡಿ ಬಸವಣ್ಣನವರ ನ್ಮಸ್ಥಳ. ಐತಿಹಾಸಿಕವಾಗಿ ಪ್ರಸಿದ್ಧವಾಗಿರುವ ಬಿಜಾಪುರ ಜಿಲ್ಲೆ ಂದೂ ಹಾಗೂ ಮಹಮ್ಮದೀಯ ವಾಸ್ತುಶಿಲ್ಪಗಳ ತವರುಮನೆ. ಹೊಳೆ, ಬಾದಾಮಿ ಮತ್ತು ಪಟ್ಟದಕಲ್ಲು ಈ ಸ್ಥಳಗಳಲ್ಲಿನ ೇವಾಲಯಗಳು; ಬಿಜಾಪುರದ ಗೋಳಗುಮ್ಮಟ, ಇಬ್ರಾಹಿಂ ೋಜಾ ಮತ್ತಿತರ ಮಸೀದಿಗಳು ಉತ್ತಮ ವಾಸ್ತುಶಿಲ್ಪಗಳಾಗಿವೆ. ಷ್ಣ, ಭೀಮಾ, ಮಲಪ್ರಭ, ಘಟಪ್ರಭ ಮತ್ತು ಡೋಣಿ ಈ ಂಚನದಿಗಳ ಮಡಿಲಲ್ಲಿ ಕಂಗೊಳಿಸುತ್ತಿರುವ ಬಿಜಾಪುರ ಜಿಲ್ಲೆ ಷ್ಠ ಕವಿ, ಸಾಹಿತಿಗಳಿಗೆ, ಧಾರ್ಮಿಕ ಮಹಾಪುರುಷರಿಗೆ ಜನ್ಮ ್ತಿದೆ. ಮಹಾಕವಿ ರನ್ನ ಇದೇ ಜಿಲ್ಲೆಯ ಮುಧೋಳದವನೆ. ಡಲಸಂಗಮ, ಬಸವನ ಬಾಗೇವಾಡಿ, ಇಲಕಲ್ಲ, ಬಾದಾಮಿ, ನಶಂಕರಿ ಇವೆಲ್ಲ ಸಾಂಸ್ಕೃತಿಕ ಕೇಂದ್ರಗಳು. ದಕ್ಷಿಣ ಭಾರತದ

ಬಹಳಷ್ಟು ಪ್ರದೇಶವನ್ನು ಮೊಟ್ಟಮೊದಲಬಾರಿಗೆ ಆಳಿದ ಚಾಳು ಕ್ಯರು ಈ ಜಿಲ್ಲೆಯನ್ನು ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಬಿಜಾಪುರದ ಆದಿಲ್‌ಶಾಹೀ ಅರಸರು ಸಾಹಿತ್ಯ, ಸಂಗೀತ ಮತ್ತು ವಾಸ್ತುಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹವಿತ್ತರು. ಬಿಜಾಪುರ ಕರ್ನಾಟಕದ ಪ್ರಮುಖ ಪ್ರವಾಸಿಕೇಂದ್ರಗಳಲ್ಲೊಂದಾಗಿದೆ. ಬಿಜಾ ಪುರ ಮತ್ತು ಅದರ ಸುತ್ತಮುತ್ತಲ ಪ್ರದೇಶದಲ್ಲಿ ಮುನ್ನೂರಕ್ಕೂ ಹೆಚ್ಚು ಪ್ರಾಚೀನ ಕಟ್ಟಡಗಳೂ ಸ್ಮಾರಕಗಳೂ ಇವೆ. ಒಂದು ಕಾಲದಲ್ಲಿ ಬಿಜಾಪುರ ಭಾರತದಲ್ಲೇ ವೈಭವದ ನಗರವಾಗಿತ್ತು. ಇಲ್ಲಿ ಉಳಿದಿರುವ ಐತಿಹಾಸಿಕ ಕಟ್ಟಡಗಳು ಅದಕ್ಕೆ ಕುರುಹಾಗಿವೆ.

## ಅಂಕಿ ಅಂಶಗಳು

ಕರ್ನಾಟಕದ ಹತ್ತೊಂಬತ್ತು ಜಿಲ್ಲೆಗಳಲ್ಲಿ ಅತಿ ದೊಡ್ಡ ದಾದ ಜಿಲ್ಲೆ ಬಿಜಾಪುರ. ಜಿಲ್ಲೆಯ ವಿಸ್ತೀರ್ಣ 17,069 ಚದರ ಕಿ. ಮೀಟರುಗಳು. ಇದು ರಾಜ್ಯದ ಒಟ್ಟು ವಿಸ್ತೀರ್ಣದ ಶೇ. 8.9 ರಷ್ಟಾಗುತ್ತದೆ. ಉತ್ತರ ಕರ್ನಾಟಕದ ಬಿಜಾಪುರ ಜಿಲ್ಲೆ ಉತ್ತರ ಅಕ್ಷಾಂಶ 15° 19′ ಮತ್ತು 17° 29′ ಹಾಗೂ ಪೂರ್ವ ರೇಖಾಂಶ 75°19′ ಮತ್ತು 76° 32′ ಇವುಗಳ ನಡುವೆ ವಿಸ್ತರಿ ಸಿದೆ. ಬಿಜಾಪುರ ಜಿಲ್ಲೆಗೆ ಈಶಾನ್ಯ ಮತ್ತು ಪೂರ್ವದಲ್ಲಿ ಗುಲ್ಬರ್ಗ ಜಿಲ್ಲೆಯೂ, ದಕ್ಷಿಣದಲ್ಲಿ ಧಾರವಾಡ ಜಿಲ್ಲೆಯೂ, ನೈಋತ್ಯಕ್ಕೆ ಮತ್ತು ಪಶ್ಚಿಮದಲ್ಲಿ ಬೆಳಗಾವಿ ಜಿಲ್ಲೆ, ಆಗ್ನೇಯದಲಿ ರಾಯಚೂರು ಜಿಲ್ಲೆಯೂ ಹಾಗೂ ಉತ್ತರ ಮತ್ತು ವಾಯುವ್ಯ ದಲ್ಲಿ ಮಹಾರಾಷ್ಟ್ರದ ಸಾಂಗಲಿ ಮತ್ತು ಸೊಲ್ಲಾಪುರ ಜಿಲ್ಲೆಗಳಿವೆ.

ಬಿಜಾಪುರ ಜಿಲ್ಲೆಯ ಜನ ಸಂಖ್ಯೆ 1981ರ ಜನಗಣತಿಯ ಪ್ರಕಾರ 23,99,124. ಇದರಲ್ಲಿ ಗಂಡಸರು 12, 09,512;

ಹೆಂಗಸರ ಸಂಖ್ಯೆ 11, 89, 612. ಹರಿಜನರು 2, 00,000, ಗಿರಿಜನರು 6,524. ಈ ಜಿಲ್ಲೆಯಲ್ಲಿ ಒಟ್ಟು 11 ತಾಲ್ಲೂಕುಗಳೂ, 36 ಹೋಬಳಿಗಳೂ, 1268 ಗ್ರಾಮಗಳೂ ಹಾಗೂ 17 ಪಟ್ಟಣಗಳೂ ಇವೆ. ಬಾದಾಮಿ, ಬಸವನ ಬಾಗೇವಾಡಿ, ಬಾಗಲಕೋಟೆ, ಬಿಜಾಪುರ, ಬೀಳಗಿ, ಹುನಗುಂದ, ಇಂಡಿ, ಜಮಖಂಡಿ, ಮುಧೋಳ, ಮುದ್ದೇಬಿಹಾಳ ಮತ್ತು ಸಿಂದಗಿ ಇವು ಜಿಲ್ಲೆಯ ತಾಲ್ಲೂಕುಗಳು. ಈ ತಾಲ್ಲೂಕುಗಳ ವಿಸ್ತೀರ್ಣ, ಗ್ರಾಮಗಳ ಸಂಖ್ಯೆ ಹಾಗೂ ಅಲ್ಲಿ ಆಗುವ ಮಳೆಯ ಪರಿಣಾಮವನ್ನು ಕೋಷ್ಟಕ 1ರಲ್ಲಿ ಕೊಡಲಾಗಿದೆ.

**ಕೋಷ್ಟಕ 1: ಬಿಜಾಪುರ ಜಿಲ್ಲೆಯ ತಾಲ್ಲೂಕುಗಳ ವಿಸ್ತೀರ್ಣ, ಗ್ರಾಮಗಳ ಸಂಖ್ಯೆ ಮತ್ತು ಅಲ್ಲಿ ಆಗುವ ಮಳೆಯ ಪರಿಮಾಣ.**

| ಕ್ರಮ ಸಂಖ್ಯೆ | ತಾಲ್ಲೂಕು | ವಿಸ್ತೀರ್ಣ (ಚ.ಕಿ.ಮೀ.ಗಳು) | ಗ್ರಾಮಗಳು | ಮಳೆ (ವಾರ್ಷಿಕ ಸರಾಸರಿ ಮಿ.ಮೀ.ಗಳಲ್ಲಿ) |
|---|---|---|---|---|
| 1. | ಬಾದಾಮಿ | 1,406 | 156 | 623 |
| 2. | ಬಸವನ ಬಾಗೇವಾಡಿ | 1,978 | 120 | 580 |
| 3. | ಬಾಗಲಕೋಟೆ | 936 | 92 | 667 |
| 4. | ಬಿಜಾಪುರ | 2,657.8 | 108 | 721 |
| 5. | ಬೀಳಗಿ | 782 | 66 | 784 |
| 6. | ಹುನಗುಂದ | 1,352.9 | 168 | 643,81 |
| 7. | ಇಂಡಿ | 2,224.5 | 122 | 637 |
| 8. | ಜಮಖಂಡಿ | 1,169.2 | 65 | 576.99 |
| 9. | ಮುಧೋಳ | 955.41 | 77 | 462.39 |
| 10. | ಮುದ್ದೇಬಿಹಾಳ | 1,507 | 154 | 722 |
| 11. | ಸಿಂದಗಿ | 2,180.8 | 141 | 675.66 |

ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕುಗಳ ಆಡಳಿತ ಕೇಂದ್ರ ಬಿಜಾಪುರ. ಸಮುದ್ರ ಮಟ್ಟದಿಂದ ಸುಮಾರು 2,000 ಅಡಿ ಎತ್ತರದಲ್ಲಿದೆ. ಕ್ರಿ. ಶ. 1073ರಲ್ಲಿ ಚಾಲುಕ್ಯರು ಬಿಜಾಪುರವನ್ನು ವಿಜಯಪುರವೆಂದು ಕರೆದರು. ಆದಿಲ್‌ಶಾಹಿ ಅರಸರ ತರುವಾಯ ಇತರ ರಾಜರ ಧಾಳಿಗೆ ಸಿಕ್ಕಿ ಸೊರಗಿದ ಈ ನಗರ ಬ್ರಿಟಿಷರ ಕಾಲ ದಿಂದ ಅಭಿವೃದ್ಧಿ ಹೊಂದುತ್ತ ಬಂದು ಭಾರತಕ್ಕೆ ಸ್ವಾತಂತ್ರ್ಯ ದೊರೆತ ಬಳಿಕ ಶೀಘ್ರಗತಿಯಲ್ಲಿ ಬೆಳೆಯುತ್ತಿದೆ.

## ವಾಯುಗುಣ ಹಾಗೂ ಭೂ ಸಂಪತ್ತು

ಬಿಜಾಪುರ ಜಿಲ್ಲೆಯ ಭೂ ಪ್ರದೇಶ ಭೌಗೋಳಿಕವಾಗಿ ದಖನ್ ಪ್ರಸ್ಥಭೂಮಿಯ ಶುಷ್ಕ ಪ್ರದೇಶದಲ್ಲಿದೆ. ಆದಾಗ್ಯೂ ಇಲ್ಲಿನ ವಾಯುಗುಣ ಆರೋಗ್ಯಕರ. ಡಿಸೆಂಬರ್‌ನಿಂದ ಮೇ ತಿಂಗಳವರೆಗೂ ಅತ್ಯಂತ ಶುಷ್ಕ ವಾತಾವರಣವಿರುತ್ತದೆ. ಏಪ್ರಿಲ್ ತಿಂಗಳಿನಿಂದಲೇ ಆಕಾಶದಲ್ಲಿ ಮೋಡಗಳು ಕಾಣಿಸಿಕೊಳ್ಳುವುದು ಆರಂಭವಾಗುತ್ತದೆ. ಮುಂಗಾರು ಮಳೆಗಾಲದ ತಿಂಗಳುಗಳಲ್ಲಿ ದಟ್ಟನೆಯ ಮೋಡಗಳಿರುತ್ತವೆ. ಜಿಲ್ಲೆಯ ಬಾಗಲಕೋಟೆ ಹಾಗೂ ಬಾದಾಮಿ ಪ್ರದೇಶಗಳು ಇತರ ಪ್ರದೇಶಗಳಿಗಿಂತ ಹೆಚ್ಚು ಧಗೆಯಿಂದ ಕೂಡಿರುತ್ತದೆ. ಜೂನ್ ತಿಂಗಳಿನಿಂದ ಸೆಪ್ಟೆಂಬರ್ ತಿಂಗಳವರೆಗೆ ಜಿಲ್ಲೆಯಲ್ಲಿ ಮುಂಗಾರು ಮಳೆಗಾಲ. ಜಿಲ್ಲೆಯ ಸರಾಸರಿ ವಾರ್ಷಿಕ ಮಳೆ 682 ಮಿ.ಮೀ.ಗಳು. ಅಕ್ಟೋಬರ್, ನವೆಂಬರ್ ತಿಂಗಳುಗಳು ಹಿಂಗಾರು ಮಳೆಗಾಲ. ಇಡೀ ವರ್ಷ ಕಾಲ ಜಿಲ್ಲೆಯ ಬಹಳಷ್ಟು ಭಾಗಗಳು ಅದರಲ್ಲೂ ಡೋಣಿ ನದಿ ಕಣಿವೆ ಪ್ರದೇಶ ಬಲವಾದ ಮಾರುತಗಳನ್ನು ಹೊಂದಿರುತ್ತವೆ.

ಬಿಜಾಪುರ ಜಿಲ್ಲೆಯ ಮಣ್ಣು ಹೆಚ್ಚು ಸಾವಯುವ ವಸ್ತು

ಗಳನ್ನು ಹೊಂದಿರುವುದಿಲ್ಲ. ಸಾರಜನಕದ ಅಂಶವೂ ಈ ಮಣ್ಣಿನಲ್ಲಿ ಕಡಿಮೆ. ಎರಡು ರೀತಿಯ ಮಣ್ಣುಗಳನ್ನು ಜಿಲ್ಲೆಯಲ್ಲಿ ಕಾಣುತ್ತೇವೆ. ಕಪ್ಪು ಅಥವಾ ಎರೆಮಣ್ಣಿನ ಪ್ರದೇಶ ಹಾಗೂ ಕೆಂಪು ಮಣ್ಣಿನ ಪ್ರದೇಶ. ತೇವವನ್ನು ಹಿಡಿದಿಟ್ಟುಕೊಳ್ಳುವ ಕಪ್ಪು ಮಣ್ಣಿನ ಪ್ರದೇಶವೇ ಹೆಚ್ಚು. ಇಂಡಿ, ಜಮಖಂಡಿ, ಬೀಳಗಿ ತಾಲ್ಲೂಕುಗಳೂ ಕಪ್ಪು ಎರೆ ಮಣ್ಣಿನ ಪ್ರದೇಶವನ್ನು ಹೊಂದಿವೆ. ಬಾದಾಮಿ, ಬಾಗಲಕೋಟೆ ಮತ್ತು ಹುನಗುಂದ ತಾಲ್ಲೂಕುಗಳಲ್ಲಿ ಕೆಂಪು ಮಣ್ಣುಳ್ಳ ಪ್ರದೇಶವು ಹೆಚ್ಚಾಗಿರುತ್ತದೆ. ಬೆಳೆ ತೆಗೆಯಲು ಗೊಬ್ಬರವನ್ನು ಹಾಕಬೇಕಾಗುತ್ತದೆ. ಬಾದಾಮಿ ತಾಲ್ಲೂಕಿನ ಬಹುಭಾಗ ಮರಳು ಮಿಶ್ರಿತ ಕೆಂಪುಭೂಮಿ. ಈ ತಾಲ್ಲೂಕಿನ ಶೇ. 77ರಷ್ಟು ಅರಣ್ಯ ಪ್ರದೇಶ. ಕೆಂಪು ಮಣ್ಣುಳ್ಳ ಪ್ರದೇಶ ಮುಖ್ಯವಾಗಿ ಕಪ್ಪು ಮಣ್ಣಿನಷ್ಟು ಉತ್ತಮವಲ್ಲ, ಫಲವೂ ಕಡಿಮೆ. ಸಿಂದಗಿ ತಾಲ್ಲೂಕಿನಲ್ಲಿ ಭೀಮಾನದಿಯ ಸುತ್ತಲ ಪ್ರದೇಶ ಕಪ್ಪು ಮಣ್ಣಿನಿಂದ ಕೂಡಿದೆ. ಒಳ್ಳೆ ಫಲವತ್ತಾದ ಭೂಮಿ. ಭೀಮಾ ಮತ್ತು ಡೋಣಿ ನದಿಗಳಿಗೆ ಸೇರಿಕೊಳ್ಳುವ ತೊರೆಗಳ ಪ್ರದೇಶಗಳು ವ್ಯವಸಾಯಯೋಗ್ಯ.

## ಜಲಸಂಪನ್ಮೂಲಗಳು

ನದಿ, ಕೆರೆ, ತೊರೆ, ಬಂಧಾರ ಹಾಗೂ ಅಂತರ್ಜಲ ಇವು ಜಿಲ್ಲೆಯಲ್ಲಿರುವ ನೀರಿನ ಮೂಲಗಳು. ಜಿಲ್ಲೆ ಹಲವು ನದಿ ತೊರೆಗಳಿಂದ ಸಮೃದ್ಧವಾಗಿದೆ. ಬಂಧಾರಗಳು ಮತ್ತು ಕೆರೆಗಳು ನೀರಾವರಿಗೆ ಸಹಾಯಕವಾಗಿದೆ. ಜಿಲ್ಲೆಯ ಮುಖ್ಯ ನದಿ ಕೃಷ್ಣಾ. ಈ ನದಿ ಹುಟ್ಟುವುದು ಮಹಾರಾಷ್ಟ್ರದ ಸತಾರಾ ಜಿಲ್ಲೆಯಲ್ಲಿ, ಸಹ್ಯಾದ್ರಿ ಶ್ರೇಣಿಯ ಮಹಾಬಲೇಶ್ವರದ ಬಳಿ. ಉಗಮಸ್ಥಾನ

ದಿಂದ ಹಿಡಿದು ಆಂಧ್ರದ ಮಚಲಿ ಪಟ್ಟಣದ ಬಳಿ ಬಂಗಾಳ ಕೊಲ್ಲಿಯನ್ನು ಸೇರುವವರೆಗೆ ಕೃಷ್ಣಾ ನದಿಯು ಉದ್ದ 1400 ಕಿಲೋಮೀಟರುಗಳು. ಬಿಜಾಪುರ ಜಿಲ್ಲೆಯಲ್ಲಿ ಕಷ್ಣಾನದಿ ಉದ್ದ ಒಟ್ಟು 200 ಕಿ. ಮೀಗಳು. ನದಿಯು ಹಾದಿ ತಿರುವು ಮುರುವಿನ ದಾರಿ. ಮಹಾರಾಷ್ಟ್ರ ರಾಜ್ಯದ ಸತಾರ, ಸಾಂಗ್ಲಿ ಮತ್ತು ಕೊಲ್ಲಾಪುರ ಜಿಲ್ಲೆಗಳ ಮೂಲಕ ಹರಿದು ಕರ್ನಾಟಕದ ಬೆಳಗಾವಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಬಿಜಾಪುರ ಜಿಲ್ಲೆಯನ್ನು ಕೃಷ್ಣಾನದಿ ಪ್ರವೇಶಿಸುವ ಮುನ್ನ ಬಿಜಾಪುರ ಹಾಗೂ ಬೆಳಗಾವಿ ಜಿಲ್ಲೆಗಳ ಗಡಿರೇಖೆಯಾಗಿ ಸುಮಾರು 24 ಕಿ. ಮೀ.ಗಳ ದೂರ ಹರಿಯುತ್ತದೆ. ಜಮಖಂಡಿ ತಾಲ್ಲೂಕಿನ ಮುತ್ತೂರಿನ ಬಳಿ ಬಿಜಾಪುರ ಜಿಲ್ಲೆಯನ್ನು ನದಿ ಪೂರ್ಣವಾಗಿ ಪ್ರವೇಶಿಸುತ್ತದೆ. ಅದೇ ತಾಲ್ಲೂಕಿನ ನಡುವೆ ಹರಿದು ಮುಂದೆ ಸ್ವಲ್ಪ ದೂರ ಬೀಳಗಿ ತಾಲ್ಲೂಕಿನ ವಾಯುವ್ಯ ಭಾಗದಲ್ಲಿ ಸಾಗುತ್ತದೆ. ಅನಂತರ ಬಿಜಾಪುರ, ಬಸವನ ಬಾಗೇವಾಡಿ, ಮುದ್ದೇಬಿಹಾಳ ತಾಲ್ಲೂಕುಗಳನ್ನು ಬೀಳಗಿ, ಬಾಗಲಕೋಟೆ ಮತ್ತು ಹುನಗುಂದ ತಾಲ್ಲೂಕುಗಳಿಂದ ಬೇರ್ಪಡಿಸುವ ಗಡಿರೇಖೆಯಾಗಿ ಹರಿಯುತ್ತದೆ. ಬಿಜಾಪುರ, ಬಾಗೇವಾಡಿ, ಮುದ್ದೇಬಿಹಾಳ ತಾಲ್ಲೂಕುಗಳು ಎಡದಂಡೆಯಲ್ಲಿಯೂ ಬೀಳಗಿ, ಬಾಗಲಕೋಟೆ ಹಾಗೂ ಹುನಗುಂದ ತಾಲ್ಲೂಕುಗಳು ಬಲದಂಡೆಯಲ್ಲಿಯೂ ಇರುತ್ತವೆ. ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿ ಗ್ರಾಮದ ಬಳಿ ಕೃಷ್ಣಾನದಿಯನ್ನು ಘಟಪ್ರಭ ನದಿ ಕೂಡಿಕೊಳ್ಳುತ್ತದೆ. ಹುನಗುಂದ ತಾಲ್ಲೂಕಿನ ಧನ್ನೂರಿನ ಬಳಿ ಮಲಪ್ರಭಾ ನದಿ ಕೂಡಿಕೊಳ್ಳುತ್ತದೆ. ಅನಂತರ ಮುದ್ದೇಬಿಹಾಳ ತಾಲ್ಲೂಕು ಮತ್ತು ರಾಯಚೂರು ಜಿಲ್ಲೆಯ ಗಡಿಯಾಗಿ ಕೃಷ್ಣಾನದಿ ಪ್ರವಹಿಸುತ್ತದೆ. ಮಳೆಗಾಲದಲ್ಲಿ ಘಟಪ್ರಭಾ ಮತ್ತು ಮಲಪ್ರಭಾ ನದಿಗಳು ಕೃಷ್ಣಾ



ಕೂಡಲ ಸಂಗಮ

ನದಿಯನ್ನು ಕೂಡುವ ಸ್ಥಾನದಲ್ಲಿ ನದಿಯ ವಿಸ್ತಾರ 500 ಮೀಟರುಗಳಿಗೂ ಹೆಚ್ಚು.

ಬಿಜಾಪುರ ಜಿಲ್ಲೆಯ ಪ್ರದೇಶದಲ್ಲಿ ಕೃಷ್ಣಾ ನದಿ ಪಾತ್ರದಲ್ಲಿ ವಿಶಾಲವಾದ ಎರೆಮಣ್ಣಿನ ಹರವು ಕಂಡುಬರುತ್ತದೆ. ಜಮಖಂಡಿ ತಾಲ್ಲೂಕಿನ ಪಡಸಲಗಿ ಮೊದಲಾದ ಕಡೆಗಳಲ್ಲಿ ನದಿಯ ಪಾತ್ರ ದಲ್ಲಿ ಗಟ್ಟಿಬಂಡೆಗಳು ಉಂಟು. ಬಿಜಾಪುರ ಜಿಲ್ಲೆಯ ಭಾಗದಲ್ಲಿ ನದಿ ಹರಿಯುವಾಗ ಮರಳುಶಿಲೆ, ಕಣಶಿಲೆ ಮೊದಲಾದ ವಿವಿಧ ರೀತಿಯ ಶಿಲಾಪ್ರದೇಶಗಳನ್ನು ಹಾದು ಬರುತ್ತದೆಯಾದುದರಿಂದ ನದಿಯ ದಂಡೆ ಹಾಗೂ ಪಾತ್ರದಲ್ಲಿ ವಿಶೇಷವಾದ ಕಲ್ಲುಗುಂಡುಗಳ ವಿಸ್ತಾರವಾದ ಭೂಮಿಯನ್ನು ಕಾಣಬಹುದಾಗಿರುತ್ತದೆ. ನದಿಯ ಉತ್ತರ ಭಾಗ ಟ್ರ್ಯಾಪ್ ಶಿಲೆಯ ಪ್ರದೇಶ. ದಕ್ಷಿಣ ಭಾಗ ಕಲಾದಗಿ ವ್ಯವಸ್ಥೆಗೆ ಸೇರಿದ ಮರಳು ಶಿಲೆ ಪ್ರದೇಶ. ಭೀಮಾ, ಡೋಣಿ, ಮಲಪ್ರಭಾ, ಘಟಪ್ರಭಾ ಇವು ಜಿಲ್ಲೆಯ ಇತರ ನದಿಗಳು.

ಬಿಜಾಪುರ ಜಿಲ್ಲೆಯ ಮಧ್ಯಭಾಗವು ಡೋಣಿ ನದಿ ಯಿಂದಾಗಿ ಫಲವತ್ತಾಗಿದೆ. ಡೋಣಿ ನದಿ ಮಹಾರಾಷ್ಟ್ರದ ಸಾಂಗಲಿ ಜಿಲ್ಲೆಯ ಜತ್ ಪಟ್ಟಣದ ದಕ್ಷಿಣಕ್ಕೆ ಸುಮಾರು ಏಳು ಕಿ. ಮೀ.

ದೂರದಲ್ಲಿ ಹುಟ್ಟುವುದು. ಡೋಣಿ ಕೃಷ್ಣಾ ನದಿಯ ಒಂದು ಉಪನದಿ. ಬಿಜಾಪುರ ಜಿಲ್ಲೆಯಲ್ಲಿ ಡೋಣಿ ನದಿ ಬಿಜಾಪುರ, ಬಾಗೇವಾಡಿ, ಸಿಂದಗಿ ಮತ್ತು ಮುದ್ದೇಬಿಹಾಳ ತಾಲ್ಲೂಕಿನಲ್ಲಿ ಹರಿಯುತ್ತದೆ. ಉಗಮ ಸ್ಥಾನದಿಂದ ಹರಿಯ ಹೊರಟ ಡೋಣಿ ಬೆಳಗಾವಿ ಜಿಲ್ಲೆಯಲ್ಲಿ 12 ಕಿ. ಮಿಾ. ಗಳಷ್ಟು ದೂರ ಹರಿದು ಅನಂತರ ಬಿಜಾಪುರ ಜಿಲ್ಲೆಯನ್ನು ಪ್ರವೇಶಿಸಿ, ಜಿಲ್ಲೆಯಲ್ಲಿ 140 ಕಿ. ಮಿಾ. ಗಳಷ್ಟು ದೂರ ಹರಿಯುತ್ತದೆ. ಡೋಣಿ ನದಿಯ ಒಟ್ಟು ಉದ್ದ 176 ಕಿ. ಮಿಾ.ಗಳು. ಗುಲ್ಬರ್ಗ ಜಿಲ್ಲೆಯಲ್ಲಿ ಜಮಾಲಪುರ ಹಳ್ಳಿಯ ಬಳಿ ಕೃಷ್ಣಾ ನದಿಯನ್ನು ಕೂಡಿಕೊಳ್ಳು ತ್ತದೆ. ಬಾಗೇವಾಡಿ ತಾಲ್ಲೂಕಿನ ಹಂಚಿನಾಳ ಹಳ್ಳಿಯ ಸೊಗ್ಲಿನದಿ ಬಳಿಯ ಸಣ್ಣ ಡೋಣಿ ಹಾಗೂ ಮುದ್ದೇಬಿಹಾಳ ತಾಲ್ಲೂಕಿನ ಹಡಗಿನಾಳ ಹಳ್ಳಿಯ ಸೊಗ್ಲಿನದಿ ಡೋಣಿಯ ಉಪನದಿಗಳು.

ಡೋಣಿನದಿ ಕಣಿವೆ ಪ್ರದೇಶ ಒಳ್ಳೆ ಫಲವತ್ತಾದ ಭೂಮಿ, ಬಿಜಾಪುರ ಜಿಲ್ಲೆಯಲ್ಲಿ ವ್ಯವಸಾಯಕ್ಕೆ ಬಹುಮಟ್ಟಿಗೆ ನೆರವಾಗಿದೆ. 'ಡೋಣಿ ಬೆಳೆದರೆ ಓಣೆಲ್ಲ ಜೋಳ' ಎಂಬ ಗಾದೆಯ ಮಾತು ಇದಕ್ಕೆ ಸಾಕ್ಷಿ.

ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಭೀಮಾ ಶಂಕರದಲ್ಲಿ ಹುಟ್ಟಿ ಹರಿಯುವ ಭೀಮಾ ನದಿ ಬಿಜಾಪುರ ಜಿಲ್ಲೆಯ ಉತ್ತರ ತುದಿಯಲ್ಲಿರುವ ದಸೂರಿನ ಬಳಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಬಿಜಾಪುರ ಹಾಗೂ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆ ಗಳ ಗಡಿರೇಖೆಯಾಗಿ ಹರಿದು ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂ ಕಿನ ಅಗರಬೇಡದ ಬಳಿಯಿಂದ ಸಿಂದಗಿ ತಾಲ್ಲೂಕಿನ ಮಾದನಹಳ್ಳಿ ಎಂಬಲ್ಲಿಯವರೆಗೆ ಆಗ್ನೇಯಾಭಿಮುಖವಾಗಿ ಹರಿದು ಗುಲ್ಬರ್ಗ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಕೃಷ್ಣಾನದಿಯ ಉಪನದಿ ಭೀಮಾ. ನದಿಯ ಹರಿವಿನ ಒಟ್ಟು ಉದ್ದ 856 ಕಿ. ಮಿಾ.ಗಳು. ಇದರಲ್ಲಿ

ಶೇ. 70 ಭಾಗ ಮಹಾರಾಷ್ಟ್ರದಲ್ಲಿ ಮತ್ತು ಕರ್ನಾಟಕದಲ್ಲಿ ಗುಲ್ಬರ್ಗ ಜಿಲ್ಲೆಯಲ್ಲಿ 240 ಕಿ. ಮೀ. ಇರುತ್ತದೆ. ಕರ್ನಾಟಕ–ಮಹಾರಾಷ್ಟ್ರ ಹಾಗೂ ಬಿಜಾಪುರ–ಗುಲ್ಬರ್ಗ ಜಿಲ್ಲೆಗಳ ಗಡಿರೇಖೆಯಾಗಿ ಭೀಮಾ ನದಿ ಪ್ರವಹಿಸುತ್ತದೆ. ಇಂಡಿ ತಾಲ್ಲೂಕಿನಲ್ಲಿ ಬೋರಿಹಳ್ಳ ಮತ್ತು ಸತ್ನಾಳ ಹೊಳೆಯೂ ಭೀಮಾನದಿಯನ್ನು ಕೂಡಿಕೊಳ್ಳುತ್ತದೆ. ಈ ನದಿಯ ಪ್ರದೇಶದಲ್ಲಿ ಉತ್ತಮವಾದ ಕರಿ ಕಲ್ಲು, ಅಗೇಟ್ ಮೊದಲಾದ ಶಿಲೆಗಳು ಸಿಗುತ್ತವೆ. ಸಿಂದಗಿ ತಾಲ್ಲೂಕಿನಲ್ಲಿ ಭೀಮಾ ನದಿಯ ಪಾತ್ರದಲ್ಲಿ ಫಲವತ್ತಾದ ಮೆಕ್ಕಲು ಹಾಗೂ ಎರೆಮಣ್ಣು ಇರುತ್ತದೆ.

ಮಲಪ್ರಭಾ ನದಿ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನಲ್ಲಿ ಸಹ್ಯಾದ್ರಿ ಶಿಖರಗಳಲ್ಲಿ ಹುಟ್ಟಿ ಅದೇ ಜಿಲ್ಲೆಯ ಮೂಲಕ ಹರಿದು ಬಿಜಾಪುರ ಜಿಲ್ಲೆಯನ್ನು ಬಾದಾಮಿ ತಾಲ್ಲೂಕಿನ ಕರಾಳ ಕೊಪ್ಪ ಎಂಬಲ್ಲಿ ಪ್ರವೇಶಿಸುತ್ತದೆ. ಬಾದಾಮಿ ಮತ್ತು ಹುನಗುಂದ ತಾಲ್ಲೂಕುಗಳ ಮೂಲಕ ಹರಿದು ಹುನಗುಂದ ತಾಲ್ಲೂಕಿನ ಕೂಡಲ ಸಂಗಮದ ಬಳಿ ಕೃಷ್ಣಾನದಿಯನ್ನು ಕೂಡಿಕೊಳ್ಳುತ್ತದೆ. ಘಟಪ್ರಭಾ ನದಿ ಬೆಳಗಾವಿ ಜಿಲ್ಲೆಯಲ್ಲಿ ಸಹ್ಯಾದ್ರಿ ಶಿಖರಗಳಲ್ಲಿ ಉಗಮಿಸಿ ಪೂರ್ವಾಭಿಮುಖವಾಗಿ ಹರಿದು ಬಿಜಾಪುರ ಜಿಲ್ಲೆಯನ್ನು ಮುಧೋಳ ತಾಲ್ಲೂಕಿನಲ್ಲಿ ಮುಧೋಳ ಪಟ್ಟಣಕ್ಕೆ 12 ಕಿ. ಮೀ. ದೂರದಲ್ಲಿ ಪ್ರವೇಶಿಸುತ್ತದೆ. ಮುಧೋಳ ಹಾಗೂ ಬಾಗಲಕೋಟೆ ತಾಲ್ಲೂಕುಗಳ ಮೂಲಕ ಸುಮಾರು 80 ಕಿ. ಮೀ.ಗಳಷ್ಟು ದೂರ ಹರಿದು ಹೆರ್ಕಲ್ ಎಂಬಲ್ಲಿ ಕಂದರವನ್ನು ಸೃಷ್ಟಿಸಿ ಬಾಗೇವಾಡಿ ತಾಲ್ಲೂಕಿನ ಚಿಮ್ಮಲಗಿಯ ಬಳಿ ಕೃಷ್ಣಾ ನದಿಯನ್ನು ಕೂಡಿಕೊಳ್ಳುತ್ತದೆ.

ಜಿಲ್ಲೆಯ ಐದೂ ನದಿಗಳು ವ್ಯವಸಾಯಕ್ಕೆ ನೆರವಾಗಿವೆ. ಇವೇ ಅಲ್ಲದೆ ಕೆರೆಗಳು, ಬಂಧಾರಗಳು ಇದ್ದು ನೀರಾವರಿ ಸೌಕರ್ಯ

ವನ್ನು ಹೆಚ್ಚಿಸಿವೆ. ಕೆರೆಗಳಲ್ಲಿ ಬಿಜಾಪುರ ತಾಲ್ಲೂಕಿನ ಮಖಾನಪುರ ಕೆರೆ, ಮಮದಾಪುರ ಕೆರೆಗಳು, ಬಾಗೇವಾಡಿ ತಾಲ್ಲೂಕಿನ ಅಸಂಗಿಕೆರೆ, ಅರೆಶಂಕರ ಕೆರೆಗಳು, ಇಂಡಿ ತಾಲ್ಲೂಕಿನ ನಂದಕಗಿ ಕೆರೆ ಹಾಗೂ ತಡವಲಗ ಕೆರೆಗಳು, ಬಾದಾಮಿ ತಾಲ್ಲೂಕಿನ ಕೆಂದೂರು ಕೆರೆ, ಜಮಖಂಡಿ ತಾಲ್ಲೂಕಿನ ತೋದಲಬಾಗಿ ಕೆರೆ, ಸಿಂದಗಿ ತಾಲ್ಲೂಕಿನ ಬಬ್ಲೇಶ್ವರ ಮತ್ತು ರಾಮನಹಳ್ಳಿ ಕೆರೆಗಳು ಮತ್ತು ಬಾಗಲ ಕೋಟೆ ತಾಲ್ಲೂಕಿನ ಕಲಸ ಕೊಪ್ಪ ಕೆರೆಗಳೂ ಮುಖ್ಯವಾದುವು. ಕೆಲವು ಹೊಸ ಕೆರೆಗಳ ನಿರ್ಮಾಣವಾಗಿವೆ. ಅವುಗಳಲ್ಲಿ ಮುಧೋಳ ತಾಲ್ಲೂಕಿನ ಬಸವಾಪಟ್ಣ ಕೆರೆ, ಇಂಡಿ ತಾಲ್ಲೂಕಿನ ಕೊತ್ನಾಳ ಕೆರೆ, ಬಾಗೇವಾಡಿ ತಾಲ್ಲೂಕಿನ ಸುಳಖೇಡ ಕೆರೆ, ಸಿಂದಗಿಯ ಹುಣಶ್ಯಾಳ ಕೆರೆ ಮುಖ್ಯವಾಗಿದೆ. ನೀರಾವರಿ ಬಾವಿಗಳನ್ನು ನಿರ್ಮಿಸಲಾಗಿದೆ. ಜಿಲ್ಲೆಯಾದ್ಯಂತ ಇರುವ ಬಂಧಾರಗಳು ನೀರಾವರಿಗೆ ಬಹಳಷ್ಟು ನೆರವಾಗಿವೆ. ತೊರೆಗಳಲ್ಲಿ ಹರಿಯುವ ನೀರಿನ ಎತ್ತರವನ್ನು ಹೆಚ್ಚಿಸಿ ನೀರಾವರಿಗೆ ಅನುಕೂಲಮಾಡಿಕೊಳ್ಳಲು ರಚಿಸಲಾದ ಸಣ್ಣ ಒಡ್ಡುಗಳನ್ನು ಬಂಧಾರಗಳೆನ್ನುತ್ತಾರೆ. ಜಿಲ್ಲೆಯ ಗೆದ್ದಲ ಮಾರಿ ಮತ್ತು ಕಲ್ಹಾಳ ಬಂಧಾರಗಳು ಬಹುಮುಖ್ಯವಾಗಿವೆ. ದೊಡ್ಡ ಬಂಧಾರಗಳೆನ್ನಬಹುದಾದ ನೀರೊಸರುವ ಕೆರೆಗಳನ್ನು ಜಿಲ್ಲೆಯಲ್ಲಿ ರಚಿಸಲಾಗಿದೆ. ಈ ಜಲಸಂಪನ್ಮೂಲಗಳು ಬಿಜಾಪುರ ಜಿಲ್ಲೆಯಲ್ಲಿ ಧಾನ್ಯಗಳ ಬೆಳಸಿಗೆ ನೆರವು ನೀಡುತ್ತಿವೆ. ಸಾರ್ಥಕ ವಾಗುವ ರೀತಿಯಲ್ಲಿ ಇವುಗಳನ್ನು ಬಳಸುವುದೂ ಅಗತ್ಯವಾಗಿದೆ.

## ಬೆಟ್ಟಗಳು

ಬಿಜಾಪುರ ಜಿಲ್ಲೆಯಲ್ಲಿ ಬಾಗಲಕೋಟೆ, ಬಾದಾಮಿ ಹಾಗೂ ಬೀಳಗಿ ತಾಲ್ಲೂಕಿನ ಬೆಟ್ಟಗಳು ಮುಖ್ಯವಾಗಿವೆ. ಕೆಲವು ಬೆಟ್ಟಗಳು

ನೈಸ್ ಶಿಲಾವರ್ಗದವಾಗಿದೆ. ಕೃಷ್ಣಾನದಿಯ ದಕ್ಷಿಣ ಪ್ರದೇಶ ಬೆಟ್ಟ ಗುಡ್ಡಗಳ ಪ್ರದೇಶವಾಗಿದ್ದು ಇಲ್ಲಿರುವ ಬೆಟ್ಟ ಶ್ರೇಣಿಗಳನ್ನು ಮಲಪ್ರಭಾ ಉತ್ತರದ ಬೆಟ್ಟ ಶ್ರೇಣಿಗಳು ಮತ್ತು ಘಟಪ್ರಭಾ ಉತ್ತರದ ಬೆಟ್ಟ ಶ್ರೇಣಿಗಳೆಂದು ವಿಂಗಡಿಸಬಹುದಾಗಿದೆ. ಕೃಷ್ಣಾ ನದಿ ಉತ್ತರಕ್ಕಿರುವ ಭಾಗದಲ್ಲಿ ತಿಕೋಟ (ಬಿಜಾಪುರ ತಾಲ್ಲೂಕು) ಎಂಬಲ್ಲಿಂದ ಬಿಜಾಪುರ ಪಟ್ಟಣದ ಹತ್ತಿರದವರೆಗೆ ಮಹದೇವ ಬೆಟ್ಟಶ್ರೇಣಿಯು ಚಿಕ್ಕ ಕವಲಿದೆ. ಬೀಳಗಿ ತಾಲ್ಲೂಕಿನ ಮಧ್ಯಭಾಗದಲ್ಲಿ ಪಶ್ಚಿಮದ ಅಂಚಿನಿಂದ ಬೀಳಗಿ ಪಟ್ಟಣದವರೆಗೂ ಕಣಶಿಲೆಯ ಬೆಟ್ಟಪ್ರದೇಶವಿದೆ. ಇದೇ ತಾಲ್ಲೂಕಿನ ದಕ್ಷಿಣದ ಅಂಚಿನಲ್ಲಿ ಘಟಪ್ರಭಾ ನದಿಯವರೆಗೆ ಚಿಕ್ಕ ಬೆಟ್ಟಗಳ ಸಾಲು ಇದೆ. ಬಾಗಲಕೋಟೆಯಲ್ಲಿ ಕಲಾದಗಿ ಶಿಲಾವರ್ಗಕ್ಕೆ ಸೇರಿದ ಮೂರು ಬೆಟ್ಟ ಶ್ರೇಣಿಗಳಿವೆ. ಪಶ್ಚಿಮ ಭಾಗದಲ್ಲಿ ಕಲಾದಗಿ ಹತ್ತಿರ ಆಗ್ನೇಯಕ್ಕೆ ತುಳಸೀಗೇರಿಯ ಸಮೀಪ 620 ಮೀಟರ್ ಎತ್ತರದ ಬೆಟ್ಟವಿದೆ. ಇದೇ ತಾಲ್ಲೂಕಿನ ದಕ್ಷಿಣದ ಅಂಚಿನ ಉದ್ದಕ್ಕೂ ಬೆಟ್ಟಸಾಲು ಇದೆ. 630 ಮೀಟರ್ ಎತ್ತರದ ಮುಚಕಂಡಿ ಬಳಿ ಬೆಟ್ಟ, 591 ಮೀಟರ್ ಎತ್ತರದ ಶಿರೂರು ಬೆಟ್ಟ ದೊಡ್ಡವು. ಬಾಗಲಕೋಟೆ ತಾಲ್ಲೂಕಿನ ಪೂರ್ವದ ಅಂಚಿನಲ್ಲಿ 582 ಮೀಟರ್ ಎತ್ತರದ ಬೆನಕಟ್ಟಿ ಬೆಟ್ಟ ಹೆಸರಿಸಬೇಕಾದುದು. ಇದೇ ತಾಲ್ಲೂಕಿನಲ್ಲಿ ಘಟಪ್ರಭಾ ನದಿ ಬಳಿಯ ಸನಗೊಂದಿಗೂ ಉತ್ತರದ ಅಂಚಿನಲ್ಲಿರುವ ರಾಮಪುರಕ್ಕೂ ಹತ್ತಿರದ ದೊಡ್ಡ ಬೆಟ್ಟಗಳು ಗಮನಾರ್ಹ. ಜಮಖಂಡಿ ತಾಲ್ಲೂಕಿನ ದಕ್ಷಿಣದ ಕಡೆ ತೇರದಾಳದಿಂದ ಪೂರ್ವಕ್ಕೆ ಹೆಚ್ಚು ಎತ್ತರವಲ್ಲದ ಬೆಟ್ಟ ಸಾಲಿದೆ. ಬಾದಾಮಿ ತಾಲ್ಲೂಕಿನ ಗುಳೇದ ಗುಡ್ಡ ಮತ್ತು ಬಾದಾಮಿ ಮರಳು ಶಿಲೆಯ ಬೆಟ್ಟಗಳು ಮುಖ್ಯವಾದವು. ಸುಮಾರು 130 ಮೀಟರ್ ಎತ್ತರದ ಕೆಂಪು ಮರಳು

ಕಲ್ಲಿನ ಬೆಟ್ಟಗಳ ಬುಡದಲ್ಲಿ ಬಾದಾಮಿ ಪಟ್ಟಣವಿದೆ. ಈ ಎರಡೂ ಬೆಟ್ಟಗಳ ನಡುವೆ ಭೂತನಾಥ ಸರೋವರವಿದೆ.

## ಬಿಜಾಪುರ ಜಿಲ್ಲೆಯಲ್ಲಿ ಕೃಷಿ

ಬಿಜಾಪುರ ಜಿಲ್ಲೆಯಲ್ಲಿ ವ್ಯವಸಾಯವೇ ಪ್ರಧಾನ ಕಸುಬು. ಆಹಾರ ಬೆಳೆಗಳೇ ಹೆಚ್ಚು. ವ್ಯವಸಾಯದ ಭೂಮಿಯ ಮುಕ್ಕಾಲು ಭಾಗ ಇವಕ್ಕೆ ಮೀಸಲು. ಉಳಿದ ಪ್ರದೇಶದಲ್ಲಿ ಆಹಾರೇತರ ಬೆಳೆಗಳಾದ ಕಡಲೆಕಾಯಿ, ಕುಸುಬೆ, ಅಗಸೆ, ಹರಳು, ಹತ್ತಿ, ಎಳ್ಳು ಇವುಗಳನ್ನು ಬೆಳೆಯುತ್ತಾರೆ. ಒಂದು ಪ್ರದೇಶದ ಸಂಪತ್ತಿಗೆ ಕಾರಣವಾಗುವ ಬೆಳೆಗಳನ್ನು ಬೆಳೆಯುವುದಕ್ಕೆ ನೀರಾವರಿ ಅನುಕೂಲಗಳು ಇರಬೇಕಾದುದು ಅನಿವಾರ್ಯ. ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಮನವಳ್ಳಿ ಬಳಿ ಮಲಪ್ರಭಾ ನದಿಗೆ ಕಟ್ಟಲಾಗಿರುವ ಅಣೆಕಟ್ಟಿನ ಜಲಾಶಯದಿಂದ ಬಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೂಕಿಗೆ ನೀರಾವರಿ ಸೌಕರ್ಯವಿದೆ. ಕೃಷ್ಣಾ ಮೇಲ್ದಂಡೆ ಯೋಜನೆ ಬಿಜಾಪುರದ ಭಾಗ್ಯವನ್ನು ಹೆಚ್ಚಿಸುತ್ತದೆ. ಜಿಲ್ಲೆಯು ಒಂದು ಪ್ರಮುಖ ಧಾನ್ಯ ಉತ್ಪಾದನಾ ಕ್ಷೇತ್ರವೆನಿಸಿದೆ.

ಜೋಳ, ಬತ್ತ, ಸಜ್ಜೆ, ಗೋದಿ, ದ್ವಿದಳಧಾನ್ಯಗಳು, ಕಬ್ಬು, ಎಣ್ಣೆ ಬೀಜಗಳು, ವೀಳೆಯದೆಲೆ, ಮೆಣಸಿನಕಾಯಿ, ಹರಳು, ನೆಲಗಡಲೆ, ಅಲಸಂದೆ, ಹುರುಳಿ, ಬೆಳ್ಳುಳ್ಳಿ, ಕೊತ್ತಂಬರಿ ಇವು ಬಿಜಾಪುರ ಜಿಲ್ಲೆಯ ಮುಖ್ಯ ಬೆಳೆಗಳಾಗಿವೆ.

ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲೂ ಜೋಳವನ್ನು ವಿಶೇಷವಾಗಿ ಬೆಳೆಯುತ್ತಾರೆ. ಇದೊಂದು ಮುಖ್ಯ ಆಹಾರ ಬೆಳೆ. ದನಗಳಿಗೆ ಒಳ್ಳೆ ಮೇವಿನ ಆಹಾರ ನೀಡುವ ಬೆಳೆಯೂ ಆಗಿದೆ. ಕಪ್ಪು

ಮಣ್ಣು ಪ್ರದೇಶ ಈ ಬೆಳೆಗೆ ಸೂಕ್ತವೂ ಆಗಿದೆ. ಬಿಜಾಪುರ ಜಿಲ್ಲೆಯಲ್ಲಿ ಜೋಳ ಬೆಳೆಯುವ ಪ್ರದೇಶದ ವಿಸ್ತೀರ್ಣ ಸುಮಾರು ನಾಲ್ಕು ಮುಕ್ಕಾಲು ಲಕ್ಷ ಹೆಕ್ಟೇರ್‌ಗಳು. ಇಳುವರಿ ವರ್ಷಕ್ಕೆ 2,50,000 ಟನ್ನುಗಳು. ಈ ಜಿಲ್ಲೆಯಲ್ಲಿ ಜೋಳದ ತಳಿ ಅಭಿವೃದ್ಧಿ ಕಾರ್ಯವೂ ನಡೆದಿದೆ. ಬತ್ತವನ್ನು ಬಿಜಾಪುರ ಜಿಲ್ಲೆಯಲ್ಲಿ ಬೆಳೆಯುತ್ತಾರಾದರೂ ಅಷ್ಟು ಪ್ರಾಧಾನ್ಯವಲ್ಲದ ಬೆಳೆ ಇದು. ಇಂಡಿ, ಜಮಖಂಡಿ, ಬಿಜಾಪುರ, ಮುದ್ದೇಬಿಹಾಳ, ಸಿಂದಗಿ,



ಜೋಳ

ಹಾಗೂ ಹುನಗುಂದ ತಾಲ್ಲೂಕುಗಳಲ್ಲಿ ಬತ್ತದ ಬೇಸಾಯವಿದೆ. ಬಾವಿ, ಕೆರೆಗಳ ನೀರು ಉಪಯೋಗವಾಗುತ್ತದೆ. ಜಪಾನಿ ತಳಿಯ ಬತ್ತದ ಬೇಸಾಯಕ್ಕೆ ಮಮದಾಪುರ ಮತ್ತು ಕೆಂದೂರು ಕೆರೆಗಳ ನೀರನ್ನು ಬಳಸಿಕೊಳ್ಳಲಾಗುತ್ತಿದೆ. ಆದರೆ ಜಿಲ್ಲೆಯ ಮುಖ್ಯ ಆಹಾರ ಬೆಳೆ ಜೋಳವಾಗಿದ್ದು ಅಕ್ಕಿಗೆ ಅಷ್ಟು ಪ್ರಾಧಾನ್ಯತೆ ನೀಡ ಲಾಗಿಲ್ಲ. ಕರ್ನಾಟಕದಲ್ಲಿ ಶೀತಹವೆ ಇರುವ ಪ್ರದೇಶದ ಬೆಳೆಯಾದ ಗೋದಿಯನ್ನು ಉತ್ತರಭಾಗದ ಜಿಲ್ಲೆಗಳಲ್ಲಿ ಪ್ರಮುಖ ಬೆಳೆಯಾಗಿ



ಗೋದಿ

ಬೆಳೆಯುತ್ತಾರೆ. ಸಾಮಾನ್ಯವಾಗಿ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲಿ ಗೋದಿಯನ್ನು ಬೆಳೆಯುತ್ತಾರೆಯಾದರೂ ಬಾಗೇವಾಡಿ ತಾಲ್ಲೂಕಿನಲ್ಲಿ ಗೋದಿ ಬೇಸಾಯ ಹೆಚ್ಚಾಗಿದೆ. ಶುಷ್ಕವಾತಾವರಣದಲ್ಲಿ ಬೆಳೆಯುವ ಸಜ್ಜೆಯ ಬೇಸಾಯ ಬಿಜಾಪುರ, ಇಂಡಿ, ಸಿಂದಗಿ ಮತ್ತು ಹುನಗುಂದ ತಾಲ್ಲೂಕುಗಳಲ್ಲಿ ಹೆಚ್ಚು. ಉಳಿದ ತಾಲ್ಲೂಕುಗಳಲ್ಲಿಯೂ ಸಹ ಸಜ್ಜೆಯನ್ನು ಬೆಳೆಯಲಾಗುತ್ತದೆ. ಜಮಖಂಡಿ ತಾಲ್ಲೂಕಿನಲ್ಲಿ ಮೆಕ್ಕೆ ಜೋಳವನ್ನು ವಿಶೇಷವಾಗಿ ಬೆಳೆಯುತ್ತಾರೆ. ಈ ಜೋಳದ ಮೇವು ಸಿಹಿ. ದನಗಳಿಗೆ ಒಳ್ಳೆ ಆಹಾರ. ಕಡಲೆ, ಹೆಸರು, ತೊಗರಿ, ಹುರುಳಿ, ಅವರೆ, ಅಲಸಂದೆ, ಈ ದ್ವಿದಳ ಧಾನ್ಯಗಳನ್ನು ಬಿಜಾಪುರ ತಾಲ್ಲೂಕಿನಲ್ಲಿ ಹೆಚ್ಚು ವಿಸ್ತೀರ್ಣದ ಪ್ರದೇಶದಲ್ಲಿ ಬೆಳೆಯಲಾಗುತ್ತದೆ. ಬೀಳಗಿ ತಾಲ್ಲೂಕಿನಲ್ಲಿ ದ್ವಿದಳ ಧಾನ್ಯಗಳ ಬೇಸಾಯ ಕಡಿಮೆ.

ಬಿಜಾಪುರ ಜಿಲ್ಲೆಯಲ್ಲಿ ಎಳ್ಳು, ನೆಲಗಡಲೆ, ರೇಪ್‌ಬೀಜ (ಸಾಸಿವೆಯ ಒಂದು ಬಗೆ), ಕುಸುಬೆ, ಅಗಸೆ, ಹರಳು, ಹಾಗೂ ಗುರೆಳ್ಳು ಮುಖ್ಯ ಆಹಾರೇತರ ಬೆಳೆಗಳು. ಹುನಗುಂದ ತಾಲ್ಲೂಕಿನಲ್ಲಿ ರೇಪ್‌ಬೀಜದ ಬೇಸಾಯ ಹೆಚ್ಚು. ರೇಪ್ ಎಣ್ಣೆಯ ಹಿಂಡಿ ಒಳ್ಳೆ ಗೊಬ್ಬರವಾಗಿ ಉಪಯೋಗಕ್ಕೆ ಬರುತ್ತದೆ. ರೇಪ್ ತೈಲ ದೀಪಗಳನ್ನುರಿಸಲು ನೆರವಾಗುತ್ತದೆ. ಇಂಡಿ ತಾಲ್ಲೂಕಿನಲ್ಲಿ ಎಳ್ಳು ವಿಶೇಷ ಬೆಳೆ. ಬಿಳಿ, ಕಂದು ಹಾಗೂ ಕರಿ ಎಳ್ಳನ್ನು ಬೆಳೆಯುತ್ತಾರೆ. ಸೇಂಗಾ ಅಥವಾ ನೆಲಗಡಲೆಯನ್ನು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ವಿಶೇಷವಾಗಿ ಬೆಳೆಯಲಾಗುತ್ತದೆ. ಕುಸುಬೆ ಜಿಲ್ಲೆಯ ಎರಡನೆಯ ಮುಖ್ಯವಾದ ಎಣ್ಣೆಕಾಳು ಬೆಳೆ. ಕುಸುಬೆ ಬೀಜದ ತೈಲದಲ್ಲಿ ಶೇಕಡಾ 32 ರಷ್ಟು ತೈಲಾಂಶವಿರುತ್ತದೆ. ಅಡಿಗೆ ಎಣ್ಣೆಯಾಗಿ ಉಪಯೋಗಕ್ಕೆ ಬರುತ್ತದೆ. ಬಿಜಾಪುರ ತಾಲ್ಲೂಕಿನಲ್ಲಿ ಇದರ ಬೇಸಾಯ ಹೆಚ್ಚು. ಬಾಗೇವಾಡಿ ತಾಲ್ಲೂಕಿ

ನಲ್ಲಿ ಅಗಸೆ ಬೀಜದ ಬೆಳೆ ಇದೆ. ಇದು ನಾರಿನ ಬೆಳೆಯಾದರೂ ಎಣ್ಣೆಗಾಗಿ ಈ ಬೆಳೆ ಉಪಯೋಗಕ್ಕೆ ಬರುತ್ತಿದೆ.

ಬಾಗೇವಾಡಿ, ಬಾದಾಮಿ ಮತ್ತು ಬಿಜಾಪುರ ತಾಲ್ಲೂಕುಗಳಲ್ಲಿ ವೀಳೆಯದೆಲೆ ತೋಟಗಳಿವೆ. ಬಾಗೇವಾಡಿ ತಾಲ್ಲೂಕಿನ ಕೂಡಿಗಿ ಗ್ರಾಮದ ವೀಳೆಯದೆಲೆ ಹೆಸರುವಾಸಿ. ಮೆಣಸಿನಕಾಯಿ, ಅರಿಸಿನ, ಕೊತ್ತಂಬರಿ ಮತ್ತು ಬೆಳ್ಳುಳ್ಳಿ ಜಿಲ್ಲೆಯ ಸಾಂಬಾರ ಬೆಳೆಗಳಾಗಿವೆ. ಬಾಗೇವಾಡಿ ತಾಲ್ಲೂಕು ಬೆಳ್ಳುಳ್ಳಿ ಬೆಳೆಗೆ ಪ್ರಸಿದ್ಧ. ಹತ್ತಿ, ಸೆಣಬು ಹಾಗೂ ಪುಂಡಿ ಮತ್ತು ಕತ್ತಾಳೆ ಜಿಲ್ಲೆಯ ನಾರಿನ ಬೆಳೆಗಳು. ಬಿಜಾಪುರ ಜಿಲ್ಲೆಯು ಹತ್ತಿಯ ಖುಷ್ಕಿ ಬೆಳೆಗೆ ಪ್ರಸಿದ್ಧಿ. ಜಯಧರ, ಲಕ್ಷ್ಮಿ, ಸಿ ಓ 2, ಈ ಮೊದಲಾದ ಹತ್ತಿ ತಳಿಗಳ ಬೇಸಾಯ ಜಿಲ್ಲೆಯಲ್ಲಿ ಸಾಗಿದೆ. ಕಪ್ಪು ಮಣ್ಣಿನ ಪ್ರದೇಶ ಜಿಲ್ಲೆಯಲ್ಲಿದ್ದು ಹತ್ತಿ ಬೆಳೆಗೆ ಸೂಕ್ತವಾಗಿದೆ. ಸಿಂದಗಿ



ಹತ್ತಿ

ತಾಲ್ಲೂಕಿನಲ್ಲಿ ಸೆಣಬು ಕೃಷಿ ಇದೆ. ಜೋಳ ಮತ್ತು ಸಜ್ಜೆ ಬೆಳೆಯ ಮಧ್ಯೆ ಮಿಶ್ರಬೆಳೆಯಾಗಿ ಪುಂಡಿಯನ್ನು ಬೆಳೆಯುತ್ತಾರೆ. ಸಿಂದಗಿ ತಾಲ್ಲೂಕು ಈ ಬೆಳೆಗೆ ಹೆಸರಾಗಿದೆ. ಇಂಡಿ, ಜಮಖಂಡಿ, ಬೀಳಗಿ, ಮುದ್ದೇಬಿಹಾಳ, ಸಿಂದಗಿ ತಾಲ್ಲೂಕುಗಳಲ್ಲಿ ಕಬ್ಬಿನ ಬೇಸಾಯವಿದೆ.

ಈರುಳ್ಳಿ, ಗೆಣಸು, ಮೂಲಂಗಿ, ಕ್ಯಾರೆಟ್, ಬದನೆ, ಟೊಮ್ಯಾಟೊ ಇವು ಜಿಲ್ಲೆಯ ಮುಖ್ಯ ತರಕಾರಿ ಬೆಳೆಗಳು. ಬಾಳೆ, ಮಾವು, ಮುಖ್ಯ ಹಣ್ಣಿನ ಬೆಳೆಗಳು.

## ಪಶುಪಾಲನೆ ಮತ್ತು ಮೀನುಗಾರಿಕೆ

ವ್ಯವಸಾಯವಿದ್ದ ಕಡೆ ಪಶುಪಾಲನೆ ಅನಿವಾರ್ಯ. ರೈತನಿಗೆ ಎತ್ತು, ಎಮ್ಮೆಗಳು ಬಹು ಅಗತ್ಯ. ಹಾಲು ಉತ್ಪಾದನೆಗೆ ಹಸುಗಳನ್ನು ಸಾಕುವುದು ಅನಾದಿಕಾಲದಿಂದಲೂ ಇದೆ. ಮನುಷ್ಯ ಸಾಕುವ ಇತರ ಪ್ರಾಣಿಗಳು ಕುರಿ, ಹಂದಿ, ಹಾಗೂ ಪಕ್ಷಿ ಕುಲದ ಕೋಳಿಗಳು.

ಬಿಜಾಪುರ ಜಿಲ್ಲೆಯ ದನಗಳು ಖಿಲಾರ್ ತಳಿಗಳು. ಈ ತಳಿಗಳು ಹೆಚ್ಚಾಗಿ ಮಹಾರಾಷ್ಟ್ರ ರಾಜ್ಯದಲ್ಲಿರುತ್ತವೆ. ಇವುಗಳ ಗಾತ್ರ ಹೆಚ್ಚು. ಮುಖವೂ ದೊಡ್ಡದು. ಹಾಲಿನ ಇಳುವರಿ ಈ ಜಾತಿಯ ಹಸುಗಳಲ್ಲಿ ಕಡಿಮೆ. ಇವು ಸ್ಥಳೀಯ ತಳಿಗಳಲ್ಲ. ಕೃಷ್ಣಾನದಿ ತೀರದ ದನಗಳು, ಜಿಲ್ಲೆಯ ಜಮಖಂಡಿ, ಮುಧೋಳ ಭಾಗದಲ್ಲಿ ಕಾಣಸಿಗುತ್ತವೆ. ಈ ಜಾತಿಯ ಎತ್ತುಗಳು ಕರಿ ಮಣ್ಣಿನ ಭೂಮಿಯಲ್ಲಿ ಕೆಲಸ ಮಾಡಲು ಯೋಗ್ಯವಾದವು. ಇವುಗಳಲ್ಲಿಯೂ ಸಹ ಹಾಲಿನ ಇಳುವರಿ ಕಡಿಮೆ. ಎಮ್ಮೆಗಳಲ್ಲಿ

ಪಂಡರಾಪುರ ತಳಿಗಳನ್ನು ಹೆಚ್ಚಾಗಿ ಕಾಣುತ್ತೇವೆ. ಎಮ್ಮೆಗಳ ಹಾಲಿನ ಇಳುವರಿ ಹೆಚ್ಚು. ಇವು ಜನಪ್ರಿಯವೂ ಆಗಿವೆ.

ಕುರಿ ಮತ್ತು ಮೇಕೆಗಳ ಸಾಕಣೆಗೆ ಬಿಜಾಪುರ ಜಿಲ್ಲೆ ಹೆಸರಾಗಿದೆ. ಬೀಳಗಿ ತಾಲ್ಲೂಕಿನ ಅನಾಗವಾಡಿಯಲ್ಲಿ ಕುರಿ ತಳಿ ಸಂತಾನಾಭಿವೃದ್ಧಿ ಸಂಶೋಧನಾ ಕೇಂದ್ರವಿದೆ. ಜಿಲ್ಲೆಯಲ್ಲಿ ಡೆಕ್ಕನಿ ತಳಿಗಳ ಕುರಿಗಳು ಹೆಚ್ಚು. ಇವುಗಳಿಂದ ಮಿಶ್ರಿತ ಉರುಟು ಉಣ್ಣೆ ಕುರಿಯೊಂದಕ್ಕೆ ವರ್ಷಕ್ಕೆ 500 ರಿಂದ 700 ಗ್ರಾಂ.ಗಳಷ್ಟು ದೊರೆಯುತ್ತವೆ. ಜಿಲ್ಲೆಯಲ್ಲಿ ಕೋಳಿ ಸಾಕಣೆ ಒಂದು ಗೃಹ ಕೈಗಾರಿಕೆಯಾಗಿ ಬೆಳೆಯುತ್ತಿದೆ.

**1983ರ ಗಣತಿಯ ಪ್ರಕಾರ ಬಿಜಾಪುರ ಜಿಲ್ಲೆಯಲ್ಲಿ ಪಶುಸಂಪತ್ತಿನ ವಿವರ ಹೀಗಿದೆ**

| | |
|---|---|
| ದನಗಳು | 5.81,304 |
| ಎಮ್ಮೆಗಳು | 2,62,594 |
| ಕುರಿ | 3,54,940 |
| ಆಡು | 5,80.963 |
| ಹಂದಿಗಳು | 17,810 |
| ಇತರೆ ಪ್ರಾಣಿಗಳು (ಕುದುರೆ ಒಂಟೆ ಇತ್ಯಾದಿ) | 5,017 |
| ಕೋಳಿಗಳು | 5,39,126 |

ಗ್ರಾಮ ಮಟ್ಟದ ಹಾಗೂ ಜಿಲ್ಲಾಮಟ್ಟದ ಪಶು ವೈದ್ಯಕೀಯ ಸಂಸ್ಥೆಗಳೂ, ಕೃತಕ ಗರ್ಭಧಾರಣ ಕೇಂದ್ರಗಳೂ ಜಿಲ್ಲೆಯಲ್ಲಿವೆ.

ಜಿಲ್ಲೆಯ ಮತ್ಸ್ಯೋದ್ಯಮ ಸಾಧಾರಣ. ನದಿ ಹಾಗೂ ಕೆರೆಗಳೂ ಮೀನುಗಾರಿಕೆಯ ಮೂಲಗಳು. ನಾಗಾಥಾನ, ಕಲಾಸಕೊಪ್ಪ, ಶಿರೂರು ಮತ್ತು ಮಖಾನಪುರ ಮೊದಲಾದ ಕೆರೆಗಳನ್ನು ಮೀನುಗಾರಿಕೆ ಅಭಿವೃದ್ಧಿಗಾಗಿ ಬಳಸಲಾಗಿದೆ. ಬೆಂಗಾಲ್ ಕಾರ್ಪ್

ಮೀನುಗಳ ಅಭಿವೃದ್ಧಿಗೆ ಯತ್ನಿಸಲಾಗಿದೆ. ವರ್ಷವೊಂದಕ್ಕೆ ಜಿಲ್ಲೆಯ ಒಳನಾಡ ಮೀನುಗಾರಿಕೆಯ ಇಳುವರಿ ಸುಮಾರು 550 ಟನ್ನುಗಳು. ಘಟಪ್ರಭಾ ಮತ್ತು ಕೃಷ್ಣಾ ನದಿಗಳಲ್ಲಿ ಮುಖ್ಯ ವಾಗಿ ಗೊಜ್ಜರಿ ಮತ್ತು ಕುಡ್ಡಾ ಮೀನುಗಳು ದೊರೆಯುತ್ತವೆ. ಒಮ್ಮೊಮ್ಮೆ ಐದು ಅಡಿ ಉದ್ದದ ಕುಡ್ಡಾ ಮೀನು ಸಿಗುವುದೂ ಉಂಟು. ನದಿ ಕೆರೆಗಳಲ್ಲಿ ಗೊಜ್ಜಿ ಮತ್ತು ಬಾಲಿ ಮೀನುಗಳು ಸಿಗುತ್ತವೆ. ಹೆರಾಲ, ಕದರ, ಕೊಲಾಸ ಮತ್ತು ತಂಬಿ ಜಿಲ್ಲೆಯ ಇತರ ಮೀನುಗಳ ತಳಿಗಳು.

## ಅರಣ್ಯ ಸಂಪತ್ತು

ಬಿಜಾಪುರ ಜಿಲ್ಲೆಯಲ್ಲಿ ಅರಣ್ಯ ಸಂಪತ್ತು ವಿಶೇಷವಾಗಿಲ್ಲ ದಿರುವುದಕ್ಕೆ ಮುಖ್ಯವಾಗಿ ಎರಡು ಸ್ಪಷ್ಟ ಕಾರಣಗಳಿವೆ. ಹೆಚ್ಚು ಮಳೆ ಬೀಳದಿರುವುದು ಒಂದು. ಇರುವಷ್ಟು ಭೂಮಿಯ ಬಹಳಷ್ಟು ಪ್ರದೇಶವನ್ನು ವ್ಯವಸಾಯಕ್ಕೆ ಬಳಸಿರುವುದು ಮತ್ತೊಂದು. ಸ್ವಾಭಾವಿಕ ಸಸ್ಯವರ್ಗ ಬಹು ಕಡಮೆ. ಜಿಲ್ಲೆಯ ಭೌಗೋಳಿಕ ವಿಸ್ತೀರ್ಣದ ಕೇವಲ ಶೇಕಡಾ 5.1 ರಷ್ಟು ಪ್ರದೇಶ ದಲ್ಲಿ ಅರಣ್ಯವಿದೆ.

ಹೆಚ್ಚು ಅರಣ್ಯವನ್ನು ಹೊಂದಿರುವ ತಾಲ್ಲೂಕು ಬಾದಾಮಿ, ಬಿಜಾಪುರ ತಾಲ್ಲೂಕಿನಲ್ಲಿ ಅತ್ಯಂತ ಕಡಮೆ ಅರಣ್ಯಪ್ರದೇಶವಿದೆ. ಇಂಡಿ, ಮುದ್ದೇಬಿಹಾಳ ಹಾಗೂ ಸಿಂದಗಿ ತಾಲ್ಲೂಕುಗಳಲ್ಲಿ ಅರಣ್ಯ ಗಳಿರುವುದಿಲ್ಲ. ಜಮಖಂಡಿ, ಬಾದಾಮಿ, ಮುಧೋಳ ಮತ್ತು ಬೀಳಗಿ ತಾಲ್ಲೂಕುಗಳಲ್ಲಿ ದಟ್ಟವಾದ ಕಾಡುಗಳಿರುತ್ತವೆ. ಬಿಜಾಪುರ ಜಿಲ್ಲೆಯಲ್ಲಿ ಆರಣ್ಯಗಳು ಬೆಟ್ಟ ಗುಡ್ಡಗಳ ಕಾಡು ಗಳು ಮತ್ತು ಸಮತಟ್ಟು ಪ್ರದೇಶದ ಕಾಡುಗಳೆಂದು ಎರಡು

ಬಗೆಯಾಗಿ ಹೇಳಬಹುದಾದ ಒಣ ಹಾಗೂ ಉಷ್ಣವಲಯದ ಮುಳ್ಳು ಗಿಡಗಳ ಕಾಡುಗಳು.

ಬೆಟ್ಟ ಮತ್ತು ಗುಡ್ಡಗಳ ಕಾಡುಗಳಲ್ಲಿ ಕಕ್ಕೆ, ಕಗ್ಲಿ (ಖೈರ್), ಗಂಧ, ಚುಜ್ಜಲು, ದಿಂಡಲು, ಹಲಗಟ್ಟಿ, ಈ ಮರಗಳನ್ನು ಕಾಣ ಬಹುದು. ಕಲಾದಗಿ ಮತ್ತು ಮುಧೋಳ ಪ್ರದೇಶಗಳಲ್ಲಿ ಖೈರ್ ವೃಕ್ಷವನ್ನು ಹೆಚ್ಚಾಗಿ ಕಾಣುತ್ತೇವೆ. ಖೈರ್ ಅಥವಾ ಕಗ್ಲಿ ಮರಬಹಳ ಗಟ್ಟಿ, ಮತ್ತು ಭಾರ. ಮನೆಗಳ ಕಂಬಗಳಿಗೂ, ನೇಗಿಲುಗಳಿಗೂ, ಕಬ್ಬಿನ ಗಾಣಗಳಿಗೂ ಈ ಮರ ಉಪಯೋಗಿಸುತ್ತಾರೆ. ಮರದ ಚೇಗು, ಕಾಚು ತಯಾರಿಕೆಗೆ ಒದಗುತ್ತದೆ. ಸೀತಿಮನಿ, ಜಾನಮಟ್ಟಿ, ಅರಕೇಸರಿ, ಉಳಿಯ ಕಾಡುಗಳಲ್ಲಿ ದಿಂಡಲು ಸಾಮಾನ್ಯ. ಒಂದು ಕಾಲಕ್ಕೆ ಗಂಧ ಹೆಚ್ಚಾಗಿದ್ದ ಕಾಡುಗಳಲ್ಲಿ ಈಗ ಅಪರೂಪ. ಬಾದಾಮಿ ಹುನಗುಂದದ ಬೆಟ್ಟಗುಡ್ಡಗಳ ಹಾಗೂ ಮುಧೋಳ ತಾಲ್ಲೂಕಿನ ಗೂಡೂರು ಮತ್ತು ಕೆಂಲೂರಿನ ಭಾಗದ ಕಾಡುಗಳನ್ನು ರಕ್ಷಿಸಲಾಗಿದೆ. ಮೈದಾನ ಪ್ರದೇಶದ ಕಾಡುಗಳಲ್ಲಿನ ಮುಖ್ಯವೃಕ್ಷ ಅಕೇಷಿಯಾ ಅರೇಬಿಕಾ ಅಥವಾ ಜಾಲಿ. ಇದನ್ನು ಸೌದೆಗೆ ಹೆಚ್ಚಾಗಿ ಉಪಯೋಗಿಸುತ್ತಾರೆ. ಮರ ಎತ್ತಿನ ಬಂಡಿ ಭಾಗಗಳಿಗೂ, ವ್ಯವ ಸಾಯ ಮುಟ್ಟುಗಳಿಗೂ ಉಪಯೋಗವಾಗುತ್ತದೆ. ಇತರ ಮರಗಳು ಬೇವು, ಹುಣಸೆ, ನೇರಳೆ, ಆಲ, ಹುಲಗಲು. ರೋಸಾ ಹುಲ್ಲಿನ ಸೋಫಿಯಾ ಬಗೆ ಹುಲ್ಲು, ಆಂಡ್ರಾ ಪೋಗಾನ್ ಕಾಂಟೆರ್ಟಸ್ ಹುಲ್ಲುಗಳು ಬೆಳೆಯುತ್ತವೆ. ತುಮ್ರಿ ಮರದ ಎಲೆಗಳು, ಜೇನು ಮೇಣ, ಜೇನುತುಪ್ಪ, ಹುಣಸೆಹಣ್ಣು ಇವು ಕೆಲವು ಅರಣ್ಯದ ಉತ್ಪನ್ನಗಳು. ಈ ಭಾಗದಲ್ಲಿ ಕೃತಕವಾಗಿ ಅರಣ್ಯಗಳನ್ನು ಬೆಳೆಸು ವುದು ಅವಶ್ಯವಾಗಿದೆ.

ಜಿಲ್ಲೆಯಲ್ಲಿ ಅರಣ್ಯಗಳು ತುಂಬಾ ಕಡಮೆ ಪ್ರದೇಶದಲ್ಲಿರು ವುದರಿಂದ ಅರಣ್ಯ ಮೃಗಗಳ ಸಂಖ್ಯೆ, ಬಗೆಗಳೂ ಕಡಮೆಯಾಗಿವೆ.

ಜಲಪಕ್ಷಿಗಳೂ ಸಾಕಷ್ಟಿಲ್ಲ. ಸ್ವಾಭಾವಿಕ ಸಸ್ಯವರ್ಗ ಕಡಮೆಯಾದಂತೆ ಮೃಗ ಪಕ್ಷಿಗಳ ಸಂಖ್ಯೆಯೂ ಕ್ಷೀಣಿಸುತ್ತಿದೆ. ಈ ದೃಷ್ಟಿಯಿಂದಲೂ ಅರಣ್ಯಗಳನ್ನು ರಕ್ಷಿಸುವುದು ಅಗತ್ಯವೇ ಆಗಿದೆ.

ಹುಲಿ, ಚಿರತೆ, ಕರಡಿಗಳು ಇಲ್ಲಿ ಇರುವುದಿಲ್ಲ. ಕಾಡುಬೆಕ್ಕನ್ನು ಬೆಟ್ಟದ ಕಾಡುಗಳಲ್ಲಿ ಕಾಣುತ್ತೇವೆ. ಕತ್ತೆ ಕಿರುಬಗಳು ಕಳೆದ 20 ವರ್ಷಗಳಿಂದ ಕಡಮೆಯಾಗುತ್ತಿದೆ. ಬಾದಾಮಿ, ಬಾಗೇವಾಡಿ ತಾಲ್ಲೂಕುಗಳ ಕಾಡುಗಳಲ್ಲಿ ಕತ್ತೆಕಿರುಬಗಳು ಕಾಣಸಿಗುತ್ತವೆ. ನರಿ, ಮುಳ್ಳು ಹಂದಿ, ಚಿಗರೆ, ಮೊಲ, ಕೋತಿ, ಕಾಡುಹಂದಿ, ಬಾವಲಿ ಇವು ಇತರ ಪ್ರಾಣಿಗಳು.

ಕೌಜುಗ, ನವಿಲು, ಪುರಲೆ ಹಕ್ಕಿ, ಹಸಿರುಪಾರಿವಾಳ, ಬಸ್ಟರ್ಡ್, ಕಲ್ಲುಕೋಳಿ, ಕೊಕ್ಕರೆ ಇವು ಜಿಲ್ಲೆಯಲ್ಲಿ ಲಭ್ಯವಿರುವ ಪಕ್ಷಿಗಳು. ಚಿಂಗಿಹಾವು, ನಾಗರಹಾವು, ಮಂಡಲದಹಾವು ಈ ಹಾವುಗಳು ಜಿಲ್ಲೆಯಲ್ಲಿ ಇಂದಿಗೂ ಇವೆ. ನಾಗರ ಹಾವು ಸಾಮಾನ್ಯ ಎನ್ನಲಾಗಿದೆ. ಕೃಷ್ಣಾನದಿ ತೀರ ಕೆಲವು ಹಕ್ಕಿಗಳಿಗೆ ಸೂಕ್ತಪರಿಸರವನ್ನೊದಗಿಸಿವೆ. ಬಾದಾಮಿ ತಾಲ್ಲೂಕಿನ ದೊಡ್ಡ ಕೆರೆಗಳು ಹಸಿರು ಪಾರಿವಾಳವನ್ನು ಬರಮಾಡಿಕೊಳ್ಳುತ್ತವೆ. ಹಕ್ಕಿಗಳನ್ನು ಹೊಡೆದು ತಿನ್ನುವುದು ರೂಢಿಯಾಗಿದೆ. ಪರಿಸರ ಸಮತೋಲ ದೃಷ್ಟಿಯಿಂದ ಪ್ರಾಣಿ, ಪಕ್ಷಿಗಳ ಉಳಿವು ಅಗತ್ಯ.

## ನೆಲ—ಖನಿಜ

ಬಿಜಾಪುರ ಜಿಲ್ಲೆಯಲ್ಲಿ ಕೃಷ್ಣಾ ನದಿಯ ಉತ್ತರ ಭಾಗ ದಖನ್ ಟ್ರ್ಯಾಪ್ ಶಿಲೆಗಳ ಪ್ರದೇಶವಾಗಿದೆ. ಒತ್ತಡದಿಂದ ಸಂಕುಚಿತವಾಗಿ, ಮಡಿಸಿ, ತಿರುಚಿ ಚೂರ್ಣೀಕೃತಗೊಂಡ ಆರ್ಷೇಯ ಕಲ್ಪದ ಶಿಲಾ ಗುಂಪಿನ ಮೇಲೆ ಸಂಗ್ರಹಗೊಂಡು ಉತ್ಪನ್ನವಾದ

ಪ್ರಸ್ತುರೀ ಶಿಲೆಗಳು ರಚನೆಯಾದ ಕೋಟ್ಯಾಂತರ ವರ್ಷಗಳಾದ ಮೇಲೆ ನೆಲ ಬಿರಿದು ಹೊರಹೊಮ್ಮಿದ ಶಿಲಾರಸವು ಗಟ್ಟಿಗೊಂಡು ಬಳಿಕ ಉಂಟಾದ ಶಿಲೆಗಳು ಇವು. ಬೆಳಗಾವಿ, ಬಿಜಾಪುರ ಹಾಗೂ ಗುಲ್ಬರ್ಗ ಜಿಲ್ಲೆಗಳಲ್ಲಿ ದಖನ್ ಟ್ರ್ಯಾಪ್ ಶಿಲಾವರ್ಗ ಸುಮಾರು 25,600 ಚದರ ಕಿ.ಮೀ. ಗಳಷ್ಟು ವಿಸ್ತರಿಸಿದೆ. ಕೃಷ್ಣಾನದಿಯ ದಕ್ಷಿಣ ಭಾಗ ಕಲಾದಗಿ ಶಿಲಾವರ್ಗದಿಂದ ಕೂಡಿದೆ. ಬಿಜಾಪುರ ಜಿಲ್ಲೆಯಲ್ಲಿ ಕಂಡುಬರುವ ಪ್ರಿಕೇಂಬ್ರಿಯನ್ ಯುಗದ ಶಿಲಾ ಶ್ರೇಣಿಯ ಉತ್ತಮ ರೀತಿಯ ವಿನ್ಯಾಸ ಮೊದಲಿಗೆ ಕಲಾದಗಿಯಲ್ಲಿ (ಬಾಗಲಕೋಟೆ ತಾಲ್ಲೂಕು) ಕಂಡುಬಂದುದರಿಂದ ಈ ಶಿಲಾ ಶ್ರೇಣಿಗೆ ಕಲಾದಗಿ ಶ್ರೇಣಿ ಅಥವಾ ಶಿಲಾವರ್ಗ ಎಂದು ಹೆಸರಿದೆ. ಈ ಹೆಸರನ್ನು ಮೊದಲಿಗೆ ಸೂಚಿಸಿದ ಭೂವಿಜ್ಞಾನಿ ರಾಬರ್ಟ್ ಬ್ರೂಸ್ ಫುಟ್ ಎಂಬಾತ.

ಜಿಲ್ಲೆಯ ಆಗ್ನೇಯ ಭಾಗ ನೈಸ್ ಶಿಲಾ ಪ್ರದೇಶವಾಗಿದೆ. ಬೀಳಗಿ, ರೊಳ್ಳಿ, ಚಿಮಲಗಿ, ಗುಳೇದಗುಡ್ಡ, ಪಟ್ಟದಕಲ್ಲು ಮತ್ತು ಮುದ್ದೇಬಿಹಾಳಗಳ ಬಳಿ ದೊಡ್ಡ ಹಾಗೂ ಗುಂಡನೆಯ ಕಲ್ಲುಗಳಾಗಿ ಗ್ರ್ಯಾನೈಟ್ ಮತ್ತು ಗ್ರ್ಯಾನೈಟ್‌ನೈಸ್‌ಗಳು ಸಣ್ಣ ಗುಡ್ಡಗಳ ಮೇಲೆ ಗೋಚರಿಸುತ್ತವೆ. ಮುದ್ದೇಬಿಹಾಳದ ಉತ್ತರಕ್ಕೆ ಪುರಾತನ ನೈಸ್ ಶಿಲಾ ಬಂಡೆಗಳ ಮೇಲೆ ಭೀಮಾವರ್ಗದ ರೂಪಾಂತರಗೊಳ್ಳದ ಗಸಿ ಕಾಣಿಸುತ್ತದೆ.

ಬಿಜಾಪುರ ಜಿಲ್ಲೆಯಲ್ಲಿ ಆರ್ಥಿಕವಾಗಿ ಲಾಭ ತರುವ ಖನಿಜಗಳು ಅಷ್ಟಾಗಿ ಇಲ್ಲ. ಮುಧೋಳ ಮತ್ತು ಬಾಗಲಕೋಟೆ ತಾಲ್ಲೂಕುಗಳಲ್ಲಿನ ಸುಣ್ಣಕಲ್ಲು ಮತ್ತು ಕಲ್ನಾರುಗಳಷ್ಟೆ ಹೆಸರಿಸಬಹುದಾದಂಥವು. ಎಲ್ಲಿಗುಟ್ಟಿ ಎಂಬಲ್ಲಿ ಕಲ್ನಾರು ಸಿಗುತ್ತದೆ. ಎಷ್ಟೋ ಕಲ್ನಾರನ್ನು ಈಗಾಗಲೇ ತೆಗೆದು ಬಳಸಲಾಗಿದೆ.

ಕಟ್ಟಡ ನಿರ್ಮಾಣಕ್ಕೆ ಬಳಸಬಹುದಾದ ಕಲ್ಲುಗಳು ಜಿಲ್ಲೆ

ಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಿಗುತ್ತವೆ. ಕೃಷ್ಣಾ ನದಿಗೆ ದಕ್ಷಿಣ ದಲ್ಲಿನ ಕ್ವಾರ್ಟ್‌ಜೈಟ್ ಮತ್ತು ಮರಳುಗಲ್ಲಿನ ಬೆಟ್ಟಸಾಲುಗಳೂ ಮುದ್ದೇಬಿಹಾಳದ ಉತ್ತರಕ್ಕಿರುವ ಮರಳುಗಲ್ಲಿನ ಬೆಟ್ಟ ಸಾಲು ಗಳು ಕಟ್ಟಡ ಕಲ್ಲುಗಳನ್ನು ಒದಗಿಸುತ್ತವೆ. ಬೀಳಗಿ, ರೊಳ್ಳಿ, ಪಟ್ಟದಕಲ್ಲು ಬಳಿ ಸಿಗುವ ಊದಾದಿಂದ ಬೂದು ಬಣ್ಣದ ವರೆಗಿನ ಗ್ರ್ಯಾನೈಟ್‌ಗಳಿಗೆ ಒಳ್ಳೆ ಪಾಲಿಷ್‌ಕೊಟ್ಟು ಅಲಂಕಾರ ಶಿಲೆ ಗಳನ್ನಾಗಿ ಉಪಯೋಗಿಸಬಹುದಾಗಿದೆ. ಹೀಗೆಯೆ ಕೆಳಪದರದ ಕಲಾದಗಿ ಸುಣ್ಣಶಿಲೆಗಳನ್ನು, ತಾಳಿಕೋಟೆ ಬಳಿಯ ಮೇಲು ವರ್ಗದ ಭೀಮಾ ಸುಣ್ಣ ಶಿಲೆಗಳನ್ನು ಅಲಂಕಾರ ಶಿಲೆಗಳನ್ನಾಗಿ ಬಳಸಬಹುದಾಗಿದೆ.

ಬಾದಾಮಿ ತಾಲ್ಲೂಕಿನ ಗುಳೇದಗುಡ್ಡದ ದಕ್ಷಿಣಕ್ಕೆ ಬಿಳಿ ಮರಳುಗಲ್ಲು ಸಿಗುತ್ತಿದ್ದು ಮಧ್ಯದಿಂದ ಕೆಳದರ್ಜೆಯ ಗಾಜು ತಯಾರಿಸಲು ಈ ಖನಿಜ ಒದಗುತ್ತದೆ. ಬಾಗಲಕೋಟೆ ಹಾಗೂ ಮುಧೋಳ ತಾಲ್ಲೂಕುಗಳು ಉತ್ತಮ ದರ್ಜೆಯ ಸುಣ್ಣಕಲ್ಲಿನ ಭಂಡಾರವಾಗಿದೆ. ಬಾಗಲಕೋಟೆ ಸಿಮೆಂಟ್ ಕಾರ್ಖಾನೆ ಇಲ್ಲಿ ದೊರೆಯುವ ಸುಣ್ಣಕಲ್ಲನ್ನು ಸಿಮೆಂಟ್ ತಯಾರಿಕೆಗಾಗಿ ಬಳಸು ತ್ತಿದೆ. ಬಸನಾಳ, ಹೆರೇಕಲ್, ಎಲ್ಲಿಗುಟ್ಟೆ, ಕಮತಗಿ, ಕಡ್ಲಿಮಟ್ಟಿ ಮೊದಲಾದ ಕಡೆ ಕಬ್ಬಿಣ ದೊರಕಿಸಿಕೊಡುವ ಹೇಮಟೈಟ್ ಅದುರು ಪದರ ಶಿಲಾರೂಪದಲ್ಲಿ ಸಣ್ಣ ಸಣ್ಣ ನಿಕ್ಷೇಪವಾಗಿದ್ದರೂ ಆರ್ಥಿಕದೃಷ್ಟಿಯಿಂದ ಅವು ಲಾಭಕರವೆನಿಸಿಲ್ಲ. ಬಾಗಲಕೋಟೆಯ ಈಶಾನ್ಯಕ್ಕೆ 12 ಕಿ. ಮೀ. ದೂರದಲ್ಲಿ ಕಡಲಗೊಂಬದ ಬಳಿ ಗುಡ್ಡಗಳಲ್ಲಿ ಮ್ಯಾಂಗನೀಸ್ ಅದುರು ಬಹು ಕಡಿಮೆ ಪ್ರಮಾಣ ದಲ್ಲಿ ಸಿಗುತ್ತದೆ. ಇದೂ ಸಹ ಆರ್ಥಿಕವಾಗಿ ಪ್ರಯೋಜನಕ್ಕೆ ಬರದಾಗಿದೆ.

ಬಾಗಲಕೋಟೆಯ ಪೂರ್ವಕ್ಕೆ ಸೀತಾಡೊಂಗ ಬೆಟ್ಟದ

ಚಾಚಿನ ಮೇಲೆ ಮರಳುಗಲ್ಲಿನಲ್ಲಿ ಬಿಳಿ ಹಾಗೂ ಕೆಂಪು ಜೇಡಿ ಮಣ್ಣು ದೊರೆಯುತ್ತದೆ. ಮುಧೋಳ ತಾಲ್ಲೂಕಿನ ಕದಾರ ಕೊಪ್ಪದ ಈಶಾನ್ಯಕ್ಕೆ ಸ್ಲೇಟುಕಲ್ಲು ಗಣಿಗಳಿವೆ. ಕಲಾದಗಿಗೆ ಸಮೀಪದಲ್ಲಿಯೂ ಸಹ ಸ್ಲೇಟುಕಲ್ಲು ದೊರೆಯುತ್ತದೆ. ರೂಪಾಂತರ ಹೊಂದಿದ ಜೇಡು ಶಿಲೆಗಳೇ ಸ್ಲೇಟುಕಲ್ಲುಗಳು. ಇದನ್ನು ಸ್ಲೇಟು ಹಲಗೆ, ಮೇಜಿನ ಮೇಲು ಹಾಸು, ನೆಲಹಾಸುಗಳನ್ನು ತಯಾರಿಸಲು ಉಪಯೋಗಿಸಬಹುದಾಗಿದೆ. ಬಿಜಾಪುರ ಜಿಲ್ಲೆಯಲ್ಲಿ ತಾಮ್ರ ಬಹು ಅಲ್ಪ ಪ್ರಮಾಣದಲ್ಲಿ ದೊರೆಯುತ್ತದೆ. ಬಿಜಾಪುರ ಜಿಲ್ಲೆಯಲ್ಲಿ ಹೆಚ್ಚು ಲಾಭತರುವ ಖನಿಜವೆಂದರೆ ಸುಣ್ಣಕಲ್ಲು. ಜಮಖಂಡಿ ತಾಲ್ಲೂಕಿನಲ್ಲಿ ಸುಣ್ಣ ತಯಾರಿಕೆಗೆ ಒದಗುವ ಸುಣ್ಣದಕಲ್ಲಿನ ಗಣಿಗಳಿವೆ.

## ನೀರಾವರಿ, ವಿದ್ಯುಚ್ಛಕ್ತಿ

ಬಿಜಾಪುರ ಜಿಲ್ಲೆಯ ಭಾಗ್ಯವನ್ನು ಹೆಚ್ಚಿಸುವ ಕೃಷ್ಣಾ ಮೇಲ್ದಂಡೆ ಯೋಜನೆ ಭಾರೀ ಪ್ರಮಾಣದ ನೀರಾವರಿ ಯೋಜನೆಯಾಗಿದೆ. ನದಿ, ಕೆರೆ, ಬಾವಿ, ಬಂಧಾರಗಳು ಜಿಲ್ಲೆಯ ನೀರಾವರಿ ಮೂಲಗಳಾಗಿವೆ.

1) ಕೃಷ್ಣಾ ಮೇಲ್ದಂಡೆ ಯೋಜನೆ : ಈ ಯೋಜನೆಯಲ್ಲಿ ಮೂರು ಅಣೆಕಟ್ಟುಗಳನ್ನು ಕಟ್ಟಲಾಗುತ್ತದೆ. ಮುದ್ದೇಬಿಹಾಳ ತಾಲ್ಲೂಕಿನ ಸಿದ್ದಾಪುರ ಗ್ರಾಮದಲ್ಲಿ ನಾರಾಯಣಪುರ ಕಟ್ಟೆ, ಬಾಗೇವಾಡಿ ತಾಲ್ಲೂಕಿನ ಆಲಮಟ್ಟಿ ಗ್ರಾಮದಲ್ಲಿ ಆಲಮಟ್ಟಿ ಕಟ್ಟೆ, ಹಾಗೂ ಜಮಖಂಡಿ ತಾಲ್ಲೂಕಿನಲ್ಲಿ ಹಿಪ್ಪರಗಿ ಗ್ರಾಮದಲ್ಲಿ ಮತ್ತೊಂದು ಕಟ್ಟೆ. ಮುಖ್ಯವಾಗಿ ನಾರಾಯಣಪುರ ಹಾಗೂ ಆಲಮಟ್ಟಿ ಕಟ್ಟೆಗಳ ಕಾರ್ಯ ಜರುಗಿದೆ. ಇವೆರಡು ಭಾರಿ ಅಣೆ

ಕಟ್ಟುಗಳು. ಈ ಅಣೆಕಟ್ಟಿನ ಜಲಾಶಯುಗಳಿಂದ ಬಿಜಾಪುರ, ಗುಲ್ಬರ್ಗ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಒಟ್ಟು 8,43,353 ಹೆಕ್ಟೇರುಗಳಷ್ಟು ಭೂಮಿಗೆ ನೀರೊದಗುತ್ತದೆ. ಅಣೆಕಟ್ಟಿನ ಎಡ ಮತ್ತು ಬಲ ನಾಲೆಗಳಿಂದ ನೀರುಹಾಯಿಸಲಾಗುತ್ತದೆ.

2) ಮಲಪ್ರಭಾ ಯೋಜನೆ : ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಮನವಳ್ಳಿ ಬಳಿ ಮಲಪ್ರಭಾ ನದಿಗೆ ಅಣೆ ಕಟ್ಟು ಕಟ್ಟಲಾಗಿದೆ. ಇಲ್ಲಿ ಸಂಗ್ರಹವಾಗುವ ನೀರು ಬಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೂಕಿನಲ್ಲಿ ಒಟ್ಟು 32 ಸಾವಿರ ಹೆಕ್ಟೇರು ಗಳಷ್ಟು ಭೂಮಿಗೆ ಒದಗಿಬರುತ್ತದೆ.

3) ಘಟಪ್ರಭಾ ಯೋಜನೆ : ಘಟಪ್ರಭಾ ನದಿಯ ಎರಡನೆ ಹಂತದ ಯೋಜನೆಯಲ್ಲಿ ಬೆಳಗಾವಿ ಜಿಲ್ಲೆಯ ಹಿಡಕಲ್ ಬಳಿ ಘಟ ಪ್ರಭಾನದಿಗೆ ಅಣೆಕಟ್ಟು ಕಟ್ಟಲಾಗಿದೆ. ಇಲ್ಲಿ ಸಂಗ್ರಹಗೊಳ್ಳುವ ನೀರು ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗೆ ಒದಗುತ್ತದೆ. ಬಿಜಾಪುರ ಜಿಲ್ಲೆಯಲ್ಲಿ ಮುಧೋಳ, ಜಮಖಂಡಿ ಹಾಗೂ ಬೀಳಗಿ ತಾಲ್ಲೂಕು ಗಳಲ್ಲಿ ಸುಮಾರು 75 ಸಾವಿರ ಹೆಕ್ಟೇರುಗಳಷ್ಟು ವಿಸ್ತಾರದ ಭೂಮಿಗೆ ನೀರು ಒದಗುತ್ತದೆ. ಇದು ಮೊದಲ ಎರಡು ಹಂತ ಗಳಲ್ಲಿನ ಲಾಭಾಂಶ. ಮೂರನೆಯ ಹಂತದಲ್ಲಿ ಘಟಪ್ರಭಾ ಕಟ್ಟೆಯ ಎತ್ತರವನ್ನು ಏರಿಸಿ ಬಲದಂಡೆ ನಾಲೆಗೆ ನೀರು ಕೊಡಿಸಲಾಗುತ್ತದೆ. ಈ ಹಂತದಲ್ಲಿ ಬಿಜಾಪುರ ಜಿಲ್ಲೆಯ ಮುಧೋಳ, ಬಾಗಲಕೋಟೆ, ಹುನಗುಂದ ಮತ್ತು ಬಾದಾಮಿ ತಾಲ್ಲೂಕುಗಳಿಗೆ ನೀರೊದಗಿ ಒಟ್ಟು 1.20 ಲಕ್ಷ ಹೆಕ್ಟೇರುಗಳಷ್ಟು ಭೂಮಿ ಲಾಭ ಪಡೆ ಯುತ್ತದೆ.



4) ಅರೆಶಂಕರ ಕೆರೆ : ಬಸವನ ಬಾಗೇವಾಡಿ ತಾಲ್ಲೂಕಿನಲ್ಲಿ ಮಸುಟಹಳ್ಳಿಯಲ್ಲಿ ಹಳ್ಳದ ನೀರಿಗೆ ಕೆರೆ ಕಟ್ಟಲಾಗಿ ಇದು 1200 ಹೆಕ್ಟೇರು ಜಮೀನಿಗೆ ನೀರೊದಗಿಸುತ್ತದೆ.

5) ನಾಗಥಾನ ಬಳಿ ಕುಡುಗಿ ನಾಲೆಗೆ ಅಡ್ಡಲಾಗಿ ಕಟ್ಟೆ ಕಟ್ಟಲಾಗಿದೆ. ಇದರ ಅಚ್ಚುಕಟ್ಟು ಪ್ರದೇಶ 600 ಹೆಕ್ಟೇರುಗಳು.

6) ಚಿತ್ತವಾಡಗಿ ಕೆರೆ ಯೋಜನೆ : ಹುನಗುಂದ ತಾಲ್ಲೂಕಿಗೆ ರಾಯಚೂರು ಜಿಲ್ಲೆಯ ಚಿತ್ತವಾಡಗಿಕೆರೆಕಟ್ಟೆ ಯೋಜನೆ ಜಲಾಶಯದಿಂದ ನೀರೊದಗಿದೆ.

7) ಕಳಸಕೊಪ್ಪ : ಬಾಗಲಕೋಟೆ ತಾಲ್ಲೂಕಿನ ಕಳಸಕೊಪ್ಪ ಹಳ್ಳಿಯಲ್ಲಿ ಕಟ್ಟೆಕಟ್ಟಲಾಗಿದೆ. ಇದರ ಅಚ್ಚುಕಟ್ಟು 1,100 ಹೆಕ್ಟೇರು.

8) ಸಿಂದಗಿ ತಾಲ್ಲೂಕಿನ ರಾಮನಹಳ್ಳಿಯಲ್ಲಿ ಕೆರೆ ಕಟ್ಟಲಾಗಿದ್ದು 2,000 ಹೆಕ್ಟೇರುಗಳಷ್ಟು ಭೂಮಿಗೆ ಲಾಭ ಪಡೆಯಲಾಗುತ್ತಿದೆ. ಹುನಗುಂದ ತಾಲ್ಲೂಕಿನಲ್ಲಿ ಇಳಕಲ್ಲು, ಬೂದಿಹಾಳ, ಚಿಕ್ಕಮಾಗಿ, ಅಮೀನ ಗಡ ಮೊಲಾದ ಕಡೆ ಜಿನುಗು ಕೆರೆಗಳ ಬೇಸಾಯವಿದೆ.

ವಿದ್ಯುಚ್ಛಕ್ತಿ ಯೋಜನೆ : ಕೃಷ್ಣಾ ನದಿಯ ನೀರನ್ನು ವಿದ್ಯುಚ್ಛಕ್ತಿ ಉತ್ಪಾದನೆಗೆ ಬಳಸಿಕೊಳ್ಳಲು ಇರುವ ಸಾಧ್ಯತೆಗಳನ್ನು ಸರ್ಕಾರ ಪರಿಶೀಲಿಸುತ್ತಿದೆ. ಆಲಮಟ್ಟಿ ಅಣೆಕಟ್ಟಿನ ಬಳಿ ಒಂದು ವಿದ್ಯುದಾಗಾರವನ್ನು ನಿರ್ಮಿಸಲು ಕರಡು ಯೋಜನೆಯನ್ನು ತಯಾರಿಸಲಾಗಿದೆ. ಆಲಮಟ್ಟಿ ಜಲಾಶಯದ ನೀರು ಸಂಗ್ರಹಣಾ ಸಾಮರ್ಥ್ಯ 6425 ದಶಲಕ್ಷ ಘನಮೀಟರುಗಳಿರುತ್ತವೆ.

## ಹಾಲಿ ಕೈಗಾರಿಕೆಗಳು

ಬಿಜಾಪುರ ಜಿಲ್ಲೆಯಲ್ಲಿ ಅಮೂಲ್ಯವಾದ ಸಂಪನ್ಮೂಲಗಳಿದ್ದರೂ ಸಹ ಕೈಗಾರಿಕೆಗಳನ್ನು ಹೆಚ್ಚಾಗಿ ಸ್ಥಾಪಿಸದಿರುವುದು ಒಂದು ಕೊರತೆಯಾಗಿ ಉಳಿದಿದೆ. ಜಿಲ್ಲೆಯ ಬೀಳಗಿಯಿಂದ

ಹಿಡಿದು ತಾಳೀಕೋಟೆಯುವರೆಗೆ ನೆಲದ ಅಡಿಯು ಸುಣ್ಣಕಲ್ಲನ್ನು ಬಳಸಿ ದೇಶಕ್ಕೆ ಬೇಕಾಗುವಷ್ಟು ಸಿಮೆಂಟಿನ ಬಹುಪಾಲನ್ನು ಕೊಡ ಬಹುದಾಗಿದೆ. ಅಗತ್ಯವಾದ ರೈಲುಮಾರ್ಗಗಳನ್ನು ರೂಪಿಸಿ ಸುಣ್ಣ ಕಲ್ಲು ಸಾಗಣೆಗೆ ಅವಕಾಶ ಮಾಡಿಕೊಡಬೇಕಾಗುತ್ತದೆ.

ಬಿಜಾಪುರ ಜಿಲ್ಲೆ ಹತ್ತಿ ಬೆಳೆಗೆ ಪ್ರಸಿದ್ಧ. ಹತ್ತಿ ಬೀಜ ಬೇರ್ಪಡಿಸಿ ಅರಳೆ ತೆಗೆಯುವುದು ಒಂದು ಪ್ರಧಾನ ಕೈಗಾರಿಕೆ ಯಾಗಿ ಬೆಳೆದಿದೆ. 1895ರ ವೇಳೆಗೆ ಹತ್ತಿಬೀಜ ಬೇರ್ಪಡಿಸುವ ಕಾರ್ಖಾನೆಯನ್ನು ಸ್ಥಾಪಿಸಲಾಗಿತ್ತು. ಬಾಗಲಕೋಟೆ, ಬಿಜಾಪುರ, ಹುನಗುಂದ, ಮುದ್ದೇಬಿಹಾಳ, ಮುಧೋಳ, ಜಮಖಂಡಿ, ಬೀಳಗಿ ಹಾಗೂ ಬಾದಾಮಿ ಮತ್ತು ಸಿಂದಗಿ ತಾಲ್ಲೂಕುಗಳಲ್ಲಿ ಹತ್ತಿಬೀಜ ಬೇರ್ಪಡಿಸುವ ಕಾರ್ಖಾನೆಗಳಿವೆ. ಕೆಲವು ಕಾರ್ಖಾನೆಗಳಲ್ಲಿ ಕಡಲೆ ಕಾಯಿ ಸಿಪ್ಪೆಸುಲಿಯುವ ಯಂತ್ರಗಳನ್ನು ಇಟ್ಟುಕೊಳ್ಳಲಾಗಿದೆ. ಹತ್ತಿಯನ್ನು ವ್ಯಾಪಕವಾಗಿ ಬೆಳೆದರೂ ವಸ್ತ್ರೋದ್ಯಮ ಜಿಲ್ಲೆಯಲ್ಲಿ ಗಮನಾರ್ಹವೆನ್ನುವಂತೆ ಬೆಳೆದಿಲ್ಲ. ವಿದ್ಯುಚ್ಛಕ್ತಿ ಬಳಸಿ ನೂಲುವ ಮಗ್ಗಗಳನ್ನು ನಡೆಸಲಾಗುತ್ತಿಧೆ. ಬಿಜಾಪುರ ಜಿಲ್ಲೆಯಲ್ಲಿನ ಈ ಕಾರ್ಖಾನೆಗಳಲ್ಲಿ ಬಣ್ಣದ ಸೀರೆಗಳನ್ನು ರವಿಕೆಗಳನ್ನು ತಯಾರಿಸ ಲಾಗುತ್ತಿದೆ. ರೇಷ್ಮೆ ಉದ್ಯಮದ ಅಭಿವೃದ್ಧಿಗಾಗಿ ರೇಷ್ಮೆದಾರ ವನ್ನು ತರಿಸಿಕೊಳ್ಳಲಾಗುತ್ತಿದೆ. ಜಿಲ್ಲೆಯಲ್ಲಿ ಹಿಪ್ಪನೇರಳೆ ಬೇಸಾಯ ಇನ್ನೂ ಸಾಧಾರಣ ಸ್ಥಿತಿಯಲ್ಲಿಯೇ ಇದೆ. ವಿದ್ಯುಚ್ಛಕ್ತಿ ಹೇರಳವಾಗಿ ದೊರೆಯುವಂತಾದಾಗ ಜಿಲ್ಲೆಯಲ್ಲಿ ವಸ್ತ್ರೋದ್ಯಮ ಬೆಳೆದೀತು. ದೊಡ್ಡ ಪ್ರಮಾಣದ ಹತ್ತಿ ಬಟ್ಟೆ ಗಿರಣಿಗಳನ್ನು ತೆರೆಯುಬಹುದು.

ಜಿಲ್ಲೆಯ ಮತ್ತೊಂದು ಆಸಕ್ತಿಮೂಡಿಸುವ ಉದ್ಯಮ ಖಾದ್ಯ ಮತ್ತು ಅಖಾದ್ಯ ತೈಲಗಳ ತಯಾರಿಕೆ. ಇದೊಂದು ಹಳೆಯ ಉದ್ಯಮ. ಎಣ್ಣೆಗಿರಣಿಗಳನ್ನು ಸ್ಥಾಪಿಸುವ ಮೊದಲು

ಗಾಣಗಳನ್ನು ಬಳಸಿಯುಷ್ಟೆ ಎಣ್ಣೆ ತೆಗೆಯಲಾಗುತ್ತಿತ್ತು. ಎರಡನೆ ವಿಶ್ವ ಮಹಾಯುದ್ಧ ಆರಂಭವಾಗುವ ಮೊದಲೇ ಎಣ್ಣೆ ಗಿರಣಿಯನ್ನು ತೆರೆಯಲಾಯಿತು. ಇಂದು ಜಿಲ್ಲೆಯಲ್ಲಿ ಅರವತ್ತಕ್ಕೂ ಹೆಚ್ಚು ತೈಲಗಿರಣಿಗಳಿವೆ. ಇವೆಲ್ಲ ಸಣ್ಣಪ್ರಮಾಣದ ಕೈಗಾರಿಕೆಗಳು. ಎಣ್ಣೆ ಬೀಜಗಳ ಬೆಳೆಗೆ ಅದರಲ್ಲೂ ರೇಪ್‌ಬೀಜ, ಕುಸುಬೆ ಹಾಗೂ ಎಳ್ಳು ಬೀಜಗಳ ಬೆಳೆಗೆ ಜಿಲ್ಲೆ ಹೆಸರುವಾಸಿಯಾಗಿದೆ. ತೈಲಗಿರಣಿಗಳ ಮುಖ್ಯ ಉತ್ಪಾದನೆ ಎಣ್ಣೆ ಹಾಗೂ ಹಿಂಡಿ, ಎಣ್ಣೆ ಹಿಂಡಿಗಳನ್ನು ವಿದೇಶಗಳಿಗೂ ರಫ್ತು ಮಾಡುತ್ತಾರೆ. ಗಿರಣಿಗಳಲ್ಲಿ ಮಹಿಳೆಯರೂ ಕೆಲಸ ಮಾಡುತ್ತಾರೆ. ವರ್ಷಕ್ಕೆ 1,500 ರಿಂದ 2,000 ಟನ್‌ಗಳಷ್ಟು ತೈಲ ಹಾಗೂ 2,000 ಟನ್‌ಗಳಷ್ಟು ದನಗಳ ಮೇವಿಗೂ ಗೊಬ್ಬರಕ್ಕೂ ಉಪಯೋಗವಾಗುವ ಹಿಂಡಿಯನ್ನು ಜಿಲ್ಲೆಯಲ್ಲಿ ಉತ್ಪಾದಿಸಲಾಗುತ್ತಿದೆ. ಬಾದಾಮಿ ತಾಲ್ಲೂಕಿನಲ್ಲಿ ಕಡಲೆಕಾಯಿ ಎಣ್ಣೆ ಮತ್ತು ಹಿಂಡಿ ತಯಾರಿಕೆ ಇದೆ.

## ಸಿಮೆಂಟ್

ಬಿಜಾಪುರ ಜಿಲ್ಲೆ ಗುಲ್ಬರ್ಗ ಜಿಲ್ಲೆಯಂತೆಯೇ ಸುಣ್ಣಕಲ್ಲಿಗೆ ಹೆಸರಾಗಿದೆ. ಬಾಗಲಕೋಟೆಗೆ ಸಮೀಪದಲ್ಲಿ ಸುಣ್ಣಕಲ್ಲು ಹೇರಳವಾಗಿ ದೊರೆಯುತ್ತದೆ. 1948ರಲ್ಲಿ ಇಲ್ಲಿಯೇ ಒಂದು ಸಿಮೆಂಟ್ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಇಲ್ಲಿ ಉತ್ಪಾದನೆಯಾದ ಸಿಮೆಂಟನ್ನು ಕೊಯ್ನಾ ಮತ್ತು ಶರಾವತಿ ಯೋಜನೆಗಳಲ್ಲಿನ ಅಣೆಕಟ್ಟು ಮತ್ತು ವಿದ್ಯುದಾಗಾರಗಳ ನಿರ್ಮಾಣಕ್ಕೆ ಬಳಸಲಾಯಿತು. ಸಿಮೆಂಟ್‌ನಿಂದ ತಯಾರು ಮಾಡಬಹುದಾದ ವಸ್ತುಗಳ ತಯಾರಿಕೆಗೆ ಒಂದು ಕಾರ್ಖಾನೆಯನ್ನು ಸ್ಥಾಪಿಸುವ ಅವಕಾಶವೂ ಇದೆ. ಇಂಡಿಯನ್ ಹ್ಯೂಮ್ ಪೈಪ್ ಕಂಪೆನಿ ಬಾಗಲಕೋಟೆಯಲ್ಲಿ

ಆರ್. ಸಿ. ಸಿ. ಕಂಬಗಳ ಉತ್ಪಾದನೆಯಲ್ಲಿ ತೊಡಗಿದೆ. ಜಿಲ್ಲೆಯ ದೊಡ್ಡ ಉದ್ಯಮವೆಂದರೆ ಸಿಮೆಂಟ್ ಉತ್ಪಾದನೆಯೊಂದೆ. ಬಾಗಲಕೋಟೆ ಬಳಿ ದೊರೆಯುವ ಸುಣ್ಣಕಲ್ಲು ಉತ್ತಮವಾದ ದರ್ಜೆಯದೆನ್ನಲಾಗಿದೆ. ಬಾಗಲಕೋಟೆ, ಕಲಾದಗಿ ಮತ್ತು ಲೋಕಾಪುರಗಳಲ್ಲಿ ದೊರೆಯುವ ಸ್ಲೇಟುಕಲ್ಲನ್ನು ಉಪಯೋಗಿಸಿ ಸ್ಲೇಟುಗಳನ್ನು ನಯಗೊಳಿಸಿದ ಚಪ್ಪಡಿಗಳನ್ನು ಸಹ ತಯಾರಿಸುತ್ತಾರೆ. ಬಾಗಲಕೋಟೆ ಕಾರ್ಖಾನೆಯಲ್ಲಿ ಎನಾಮಲ್ ಹಾಕುವ ಘಟಕವನ್ನು ಸ್ಥಾಪಿಸಲಾಗಿದೆ. ಎನಾಮಲ್ ಹಾಕಿದ ವಸ್ತುಗಳನ್ನು ಇಲ್ಲಿ ತಯಾರಿಸಲಾಗುತ್ತದೆ.

ಬಾಗಲಕೋಟೆಗೆ ಒಂಬತ್ತು ಕಿ. ಮೀ. ದೂರದಲ್ಲಿನ ಗದ್ದನಕೇರಿ ಎಂಬಲ್ಲಿ ದೊರೆಯುವ ಜೇಡಿಮಣ್ಣಿನಿಂದ ಇಟ್ಟಿಗೆ ಮತ್ತು ಹೆಂಚುಗಳನ್ನು ತಯಾರಿಸುತ್ತಾರೆ. ಗಾಜಿನ ತಯಾರಿಕೆಗೆ ಬೇಕಾದ ಖನಿಜಗಳು ಬಾಗಲಕೋಟೆ ತಾಲ್ಲೂಕಿನಲ್ಲಿ ದೊರೆಯುತ್ತವೆ. ಜಿಲ್ಲೆಯಲ್ಲಿ ಗಾಜಿನ ತಯಾರಿಕೆ ಇಲ್ಲ. ಬಾದಾಮಿ, ಗೂಡೂರು, ಜಾಲಿಹಾಳ ಮತ್ತು ನಡಹಳ್ಳಿಗಳಲ್ಲಿ ಗಾಜಿನ ಬಳೆಗಳ ತಯಾರಿಕೆ ಇದೆ.

## ಗ್ರಾಮೋದ್ಯೋಗಗಳು

ಬಿಜಾಪುರ ಜಿಲ್ಲೆಯಲ್ಲಿ ಮೊದಲಿನಿಂದಲೂ ಗ್ರಾಮೋದ್ಯೋಗ ಹಾಗೂ ಗುಡಿಕೈಗಾರಿಕೆಗಳು ಇವೆ. ಕುಲಕಸುಬುಗಳನ್ನಿಟ್ಟುಕೊಂಡು ಜೀವನೋಪಾಯವನ್ನು ಕಂಡುಕೊಂಡವರು ಹೆಚ್ಚು. ಉಣ್ಣೆ ಮತ್ತು ಕಂಬಳಿ ತಯಾರಿಕೆ, ಗ್ರಾಮೀಣ ಎಣ್ಣೆ, ಅಖಾದ್ಯ ತೈಲ ಮತ್ತು ಸಾಬೂನು ತಯಾರಿಕೆ, ಕುಂಬಾರಿಕೆ, ಚರ್ಮೋದ್ಯಮ, ನಾರಿನ ವಸ್ತುಗಳ ತಯಾರಿಕೆ, ಖಂಡಸಾರಿ ಸಕ್ಕರೆ ಮತ್ತು ಬೆಲ್ಲ ತಯಾರಿಕೆ, ಬತ್ತ ಕುಟ್ಟುವುದು, ಸುಣ್ಣ ತಯಾರಿಕೆ, ಕೈ

ಕಾಗದ, ಕಮ್ಮಾರಿಕೆ, ಬಡಗಿತನ ಇವು ಜಿಲ್ಲೆಯಲ್ಲಿ ಉಳಿದು ಕೊಂಡಿರುವ ಗ್ರಾಮೋದ್ಯೋಗಗಳು. ಇವುಗಳ ಜೊತೆಗೆ ಹತ್ತಿ ಬಟ್ಟೆ ತಯಾರಿಕೆಯೂ ಇದೆ.

ಕೈಮಗ್ಗಗಳಲ್ಲಿ ನೂಲುವುದು ಗುಳೇದಗುಡ್ಡ, ಇಳಕಲ್, ರಬಕವಿ, ಬನಹಟ್ಟಿ, ಕಮತಗಿ, ಮಹಾಲಿಂಗಾಪುರ ಮೊದಲಾದ ಕಡೆಗಳಲ್ಲಿ ಇದೆ. ವ್ಯವಸಾಯ ಬಿಟ್ಟರೆ ಇದು ಎರಡನೆಯ ಪ್ರಧಾನ ಕಸುಬು, ಕೈಗಾರಿಕೆ. ಕೈಮಗ್ಗಗಳ ದೊಡ್ಡ ಕೇಂದ್ರವೇ ಆಗಿದೆ ಜಿಲ್ಲೆ. ಹತ್ತಿ ಹಾಗೂ ರೇಷ್ಮೆ ಬಟ್ಟೆ ನೂಲುವುದು ಇಲ್ಲಿನ ಕೆಲಸ. ಸೀರೆಗಳಿಗೆ ಬಣ್ಣ ಹಾಕುವುದೂ ಒಂದು ಕುಶಲ ಕೆಲಸ ಇಲ್ಲಿ. ಗುಳೇದಗುಡ್ಡದ ಕಣಗಳು ಇಳಕಲ್ಲು ಸೀರೆಗಳು ಎಂದರೆ ಕರ್ನಾಟಕ ದಲ್ಲಿ ಮನೆಮಾತು. ಇಳಕಲ್ಲಿನಲ್ಲಿ (ಹುನಗುಂದ ತಾಲ್ಲೂಕು) ಪಂಚೆ ಗಳನ್ನೂ ನೇಯುತ್ತಾರೆ. ಹತ್ತಿ ಮತ್ತು ರೇಷ್ಮೆ ಬಟ್ಟೆ ತಯಾರಿಸು ವವರ ಸಹಕಾರ ಸಂಘಗಳು ಇದ್ದು ಅದು ಕಾರ್ಮಿಕರ ಸಮಸ್ಯೆ ಗಳನ್ನು ಪರಿಹರಿಸುವಲ್ಲಿ ಯತ್ನಿಸುತ್ತದೆ. ಜಿಲ್ಲಾ ಕೈಗಾರಿಕಾ ಸಹ ಕಾರಿ ಬ್ಯಾಂಕ್ ನೂಲುವವರಿಗೆ ಧನಸಹಾಯವನ್ನು ಸಾಲರೂಪ ದಲ್ಲಿ ನೀಡುತ್ತದೆ. ಹತ್ತಿ, ರೇಷ್ಮೆ ಬಟ್ಟೆ ಬಿಟ್ಟರೆ ಉಣ್ಣೆ ಬಟ್ಟೆ ತಯಾರಿಕೆ ಜಿಲ್ಲೆಯ ಇನ್ನೊಂದು ಪ್ರಧಾನ ಉದ್ಯಮ. ಹೆಚ್ಚಾಗಿ ಇದು ಕುಲಕಸುಬು. ಬಿಜಾಪುರ, ಕುಂದರಗಿ, ಬೂದಿಹಾಳ, ಹೊನಗನಹಳ್ಳಿ, ಬಾಬಾನಗರ, ಕನಮಾಡಿ, ಗೋಣಸಗಿ, ಮೇಡ ಹಳ್ಳಿ, ಸಾವಳಗಿ, ಬನಹಟ್ಟಿ ಮತ್ತು ಮಲ್ಲಾಪುರಗಳಲ್ಲಿ ಉಣ್ಣೆ ನೇಯುವ ಕೇಂದ್ರಗಳಿವೆ. ಇಲ್ಲಿ ಕುರಿತುಪ್ಪಟದ ಕಂಬಳಿ ಮತ್ತು ಉಣ್ಣೆ ಬಟ್ಟೆ ತಯಾರಿಕೆ ಇದೆ. ಉಣ್ಣೆ ನೆಲಹಾಸುಗಳೂ ಇಲ್ಲಿ ತಯಾರಾಗುತ್ತವೆ. ನೇಯುವವರ ಸಹಕಾರ ಸಂಘವು ಖಾದಿ ಗ್ರಾಮೋದ್ಯೋಗಗಳ ಮಂಡಲಿ, ರಾಜ್ಯ ಉಣ್ಣೆ ನೂಲುವವರ ಸಹಕಾರ ಸಂಘಗಳಿಂದ ಧನಸಹಾಯ ಪಡೆಯುತ್ತದೆ.

## ಚರ್ಮೋದ್ಯಮ

ಕುಲಕಸುಬಾಗಿ ಉಳಿದಿರುವ ಚರ್ಮ ಉದ್ಯಮ ಬಿಜಾಪುರ ಜಿಲ್ಲೆಯ ಹಲವು ಜನರ ವೃತ್ತಿ. ಜಿಲ್ಲೆಯಾದ್ಯಂತ ಚರ್ಮದ ಕೆಲಸಗಾರರನ್ನು ಕಾಣುತ್ತೇವೆ. ಇಲ್ಲಿ ತಯಾರಾಗುವ ಪಾದರಕ್ಷೆಗಳು, ಚರ್ಮದ ಹಗ್ಗಗಳು ಪ್ರಸಿದ್ಧ. ಹೆಚ್ಚಾಗಿ ತಯಾರಾಗುವುದು ಪಾದರಕ್ಷೆಗಳು. ಸಮಗಾರರು ಮತ್ತು ಮೋಚಿಗಳು ಈ ಕಸುಬನ್ನು ನಡೆಸಿಕೊಂಡು ಬರುತ್ತಿದ್ದಾರೆ. ಬಿಜಾಪುರ, ಬಾಗಲಕೋಟೆ, ಸಿಂದಗಿ, ಬಾಗೇವಾಡಿ, ಇಂಡಿ, ಅಲಮೇಲಗಳಲ್ಲಿ ಚರ್ಮ ಹದಮಾಡುವ ಕೇಂದ್ರಗಳಿವೆ. ಕುರಿ, ಮೇಕೆ, ಹಸು, ಎಮ್ಮೆ ಮತ್ತು ಎತ್ತುಗಳ ಚರ್ಮವನ್ನು ಇಲ್ಲಿ ಹದಗೊಳಿಸಲಾಗುತ್ತದೆ.

## ಇತರ ಕೈಗಾರಿಕೆಗಳು

1) ಮರಗೆಲಸ : ಬಿಜಾಪುರ ಜಿಲ್ಲೆಯಲ್ಲಿ ಅರಣ್ಯಗಳು ಕಡಿಮೆ. ಮರವನ್ನವಲಂಬಿಸಿದ ಕೈಗಾರಿಕೆಗಳು ವ್ಯಾಪಕವಾಗಿ ಇರುವುದಿಲ್ಲ. ಉತ್ತರ ಕನ್ನಡ, ಧಾರವಾಡ ಜಿಲ್ಲೆಗಳಿಂದ ಮರವನ್ನು ತರಿಸಿಕೊಂಡು ಇಲ್ಲಿನ ಬಡಿಗೇರರು ಮರದ ಸಾಮಾನುಗಳನ್ನು ತಯಾರಿಸುತ್ತಾರೆ. ಬಿಜಾಪುರ, ಬಾಗಲಕೋಟೆ, ಜಮಖಂಡಿ, ಗುಳೇದಗುಡ್ಡ, ಇಳಕಲ್ಲು ಮತ್ತು ಬಾದಾಮಿಗಳು ಮರಗೆಲಸದ ಮುಖ್ಯ ಕೇಂದ್ರಗಳೆನಿಸಿವೆ. ತಾಳಿಕೋಟೆಯಲ್ಲಿ ಬಣ್ಣದ ಮರದ ತೊಟ್ಟಿಲುಗಳು ತಯಾರುಮಾಡುತ್ತಾರೆ.

2) ಬೀಗತಯಾರಿಕೆ : ಬಾಗಲಕೋಟೆ ಜಿಲ್ಲೆಯ ಪ್ರಧಾನ ಕೈಗಾರಿಕಾ ಕೇಂದ್ರವಾಗಿದ್ದು ಇಲ್ಲಿನ ಇನ್ನೊಂದು ಕೈಗಾರಿಕೆ ಬೀಗ

ತಯಾರಿಕೆ. ಆದಾಗ್ಯೂ ಇದು ಹೆಚ್ಚು ಜನಪ್ರಿಯವಾದ ಉದ್ಯಮ ವಾಗಿರುವುದಿಲ್ಲ.

3) ಕುಂಬಾರಿಕೆ : ನೀರಿನ ಹೂಜಿಗಳು, ಮಡಕೆಗಳ ತಯಾರಿಕೆ ಒಂದು ಗ್ರಾಮೋದ್ಯಮವಾಗಿ ಬೆಳೆದಿದೆ. ಚಿಮ್ಮಲಗಿ, ಗುಳೇದಗುಡ್ಡ, ಅಮೀನಗಡ ಮತ್ತು ಕಮತಗಿಗಳು ಕುಂಬಾರಿಕೆ ಕೇಂದ್ರಗಳಾಗಿವೆ. ಜಿಲ್ಲೆಯಲ್ಲಿ ಜಾತ್ರೆಗಳು ಸೇರುವಾಗ ಕುಂಬಾರರು ಮಣ್ಣಿನ ಮುದ್ದಾದ ಬೊಂಬೆಗಳನ್ನು ತಯಾರಿಸುವುದೂ ಉಂಟು.

4) ಸುಣ್ಣ ತಯಾರಿಕೆ : ಬಾದಾಮಿಯಲ್ಲಿ ಸುಣ್ಣ ಸುಡುವ ಉದ್ಯಮ ಅಭಿವೃದ್ಧಿಯಾಗಿದೆ. ಸುಣ್ಣಗಾರರ ಕುಲಕಸಬು ಸುಣ್ಣ ತಯಾರಿಕೆ. ಬಿಜಾಪುರ, ಬಾಗಲಕೋಟೆ, ಮುಧೋಳಗಳಲ್ಲೂ ಈ ಉದ್ಯಮವಿದೆ. ಸುಣ್ಣಕಲ್ಲು, ಇದ್ದಿಲು ಮತ್ತು ಸಗಣಿ ಇದ್ದಲ್ಲಿ ಈ ಉದ್ಯಮವನ್ನು ಸ್ಥಾಪಿಸಿಕೊಳ್ಳಬಹುದು.

5) ಕಮ್ಮಾರ ವೃತ್ತಿ : ಕೃಷಿ ಉಪಕರಣಗಳು, ತಕ್ಕಡಿ ತಟ್ಟೆಗಳು, ಬಕೆಟ್‌ಗಳು, ಸುತ್ತಿಗೆ ಮೊದಲಾದವನ್ನು ತಯಾರಿಸುವ ಕಮ್ಮಾರ ವೃತ್ತಿ ಬಿಜಾಪುರ, ಬಾಗಲಕೋಟೆ, ಜಮಖಂಡಿ, ಗುಳೇದಗುಡ್ಡ, ಹುನಗುಂದಗಳಲ್ಲಿದೆ. ರೈತರು ಬಳಸುವ ಉಪಕರಣಗಳನ್ನು ರಿಪೇರಿ ಮಾಡುವ ಕೆಲಸ ಕಮ್ಮಾರರದಾಗಿದೆ. ಇವರು ಕಬ್ಬಿಣದ ತೊಟ್ಟಿಲುಗಳನ್ನು ತಯಾರಿಸುತ್ತಾರೆ. ಬೀಗದ ತಯಾರಿಕೆ ಇವರ ಇನ್ನೊಂದು ಕೆಲಸ.

6) ನಾರಿನ ವಸ್ತುಗಳು : ಬಿಜಾಪುರ ಜಿಲ್ಲೆಯಲ್ಲಿ ಬೆಳೆಯಲಾಗುವ ಕತ್ತಾಳೆ ಮತ್ತು ಪುಂಡಿನಾರನ್ನು ಹಗ್ಗ, ಹುರಿ ತಯಾರಿಸುವುದಕ್ಕೆ ಬಳಸುತ್ತಾರೆ. ಬಿಜಾಪುರ, ಬಾಗಲಕೋಟೆ, ವೀರಾಪುರ, ಕಲಾದಗಿಗಳಲ್ಲಿ ನಾರಿನ ಕೈಗಾರಿಕೆ ಇದೆ. ಆದಾಗ್ಯೂ ನಾರಿನ ವಸ್ತು

ಗಳಿಗೆ ಸೂಕ್ತ ಮಾರುಕಟ್ಟೆ ದೊರೆಯುವಂತಾಗಬೇಕು. ಇಲ್ಲಿನ ಕೈಗಾರಿಕೆಗಳಲ್ಲಿ ಚಾಪೆ ಹೆಣೆಯುವುದು ಒಂದು.

7) ಹಿತ್ತಾಳೆ ಮತ್ತು ತಾಮ್ರದ ವಸ್ತುಗಳು : ಬಿಜಾಪುರ ನಗರದಲ್ಲಿ ಹಿತ್ತಾಳೆ ಮತ್ತು ತಾಮ್ರದ ಪಾತ್ರೆಗಳ ತಯಾರಿಕೆ ಒಂದು ಕೈಗಾರಿಕೆಯಾಗಿ ಬೆಳೆದಿದೆ. ಕುಶಲ ಕರ್ಮಿಗಳು ಈ ವೃತ್ತಿಯಲ್ಲಿ ತೊಡಗಿರುತ್ತಾರೆ. ಬಾಗಲಕೋಟೆ, ಗುಳೇದಗುಡ್ಡ, ಇಳಕಲ್ ಮತ್ತು ಜಮಖಂಡಿಗಳಲ್ಲೂ ಈ ವೃತ್ತಿಯಲ್ಲಿರುವವರಿದ್ದಾರೆ.

8) ಬೀಡಿ ತಯಾರಿಕೆ : ಹೊಗೆಸೊಪ್ಪು ಮತ್ತು ಬೀಡಿ ಎಲೆಗಳನ್ನು ಉಪಯೋಗಿಸಿ ಬೀಡಿ ಕಟ್ಟುತ್ತಾರೆ. ಬಿಜಾಪುರ ಮತ್ತು ಜಮಖಂಡಿಗಳಲ್ಲಿ ಬೀಡಿ ಕೈಗಾರಿಕೆ ಬೆಳೆದಿದೆ.

ಗಾಡಿಕಟ್ಟುವುದು, ಕಬ್ಬಿಣದ ಕೆಲಸ, ಮುದ್ರಣಾಲಯಗಳು ಪಾಲಿಥೀನ್ ಚೀಲಗಳ ತಯಾರಿಕೆ. ಕಲ್ನಾರು ಕೈಗಾರಿಕೆ, ಗಾಣದ ಸಹಾಯದಿಂದ ಎಣ್ಣೆ ಬೀಜಗಳನ್ನು ಅರೆಯುವುದು ಇವು ಜಿಲ್ಲೆಯ ಇನ್ನಿತರ ಕೈಗಾರಿಕೆಗಳು.

## ಉದ್ಯಮ ಅವಕಾಶಗಳು

ಬಿಜಾಪುರ ಜಿಲ್ಲೆಯಲ್ಲಿ ಜೋಳ, ಎಣ್ಣೆ ಬೀಜಗಳು ಮುಖ್ಯ ಬೆಳೆಯಾಗಿವೆ. ಸುಣ್ಣಕಲ್ಲು ಸಿಗುತ್ತದೆ. ಹತ್ತಿ ಒಳ್ಳೆ ವಾಣಿಜ್ಯ ಬೆಳೆ. ಕ್ಯಾಲ್ಸೈಟ್ ದೊರೆಯುತ್ತದೆ. ನೀರಿನ ಸೌಕರ್ಯವಿದೆ. ಹೀಗೆ ಸಂಪನ್ಮೂಲಗಳು ಇದ್ದು ಇನ್ನೂ ಕೆಲವು ಹೊಸ ಕೈಗಾರಿಕೆಗಳಿಗೆ ಅವಕಾಶವಿದೆ.

ಬೇವು, ಹರಳು, ಅಗಸೆ ಈ ಎಣ್ಣೆ ಬೀಜಗಳನ್ನು ಬೆಳೆಯಲಾಗುತ್ತಾದ್ದರಿಂದ ಅಖಾದ್ಯತೈಲಗಳನ್ನು ತಯಾರಿಸುವ ಉದ್ಯಮಕ್ಕೆ ಅವಕಾಶವಿದೆ. ಈ ಎಣ್ಣೆಗಳನ್ನು ಬಳಸಿ ಬಣ್ಣ ಮತ್ತು ವಾರ್ನಿಷ್

ಗಳನ್ನು ತಯಾರಿಸುವ ಘಟಕಗಳನ್ನು ಸ್ಥಾಪಿಸಬಹುದು. ಸಾಬೂನು ತಯಾರಿಕೆಯನ್ನು ಕೈಕೊಳ್ಳಬಹುದು. ಜೋಳ ಆಹಾರದ ಬೆಳೆಯಾಗಿದೆ. ಜೋಳದ ದಂಟನ್ನು ಚಾಪೆ ಹೆಣೆಯಲು ಉಪಯೋಗಿಸಬಹುದಾಗಿದೆ. ಜೋಳದ ಕಾಳಿನಿಂದ ಪಿಷ್ಟ, ಹಿಟ್ಟು ಡೆಕ್ಸ್ಟ್ರೀನ್, ಖಾದ್ಯ ಎಣ್ಣೆಗಳು ಮತ್ತು ಬ್ಯೂಟೈಲ್, ಆಲ್ಕೋಹಾಲ್‌ಅನ್ನು ತಯಾರಿಸಬಹುದಾಗಿದೆ. ಬೀಜ ಕೋಶದಲ್ಲಿರುವ ಮೇಣದಂಥ ಪದಾರ್ಥವನ್ನು ಪಾದರಕ್ಷೆ ಮತ್ತು ಮರದ ಸಾಮಾನು ಗಳಿಗೆ ಮೆರಗು ಕೊಡುವ ವಸ್ತುವಿನ ತಯಾರಿಕೆಯಲ್ಲಿ ಬಳಸಬಹುದಾಗಿದೆ. ಜೋಳದ ಕೆಲವು ತಳಿಗಳಲ್ಲಿ ಕಾಳನ್ನು ಬೇರ್ಪಡಿಸಿ ಕೃಷಿ ಉಳಿದ ತೆನೆಯನ್ನು ಪೊರಕೆಯಾಗಿ ಉಪಯೋಗಿಸಬಹುದಾಗಿದೆ. ಜೋಳದ ಕೃಷಿಕರು ಇಂತಹ ಕೆಲವು ಉಪಯೋಗಗಳನ್ನು ತಿಳಿದು ಸೂಕ್ತ ರೀತಿಯ ಕೈಗಾರಿಕೆಗಳನ್ನು ಸ್ಥಾಪಿಸಬಹುದಾಗಿದೆ. ಜೋಳದದಿಂಡಿನ ಮಧ್ಯಭಾಗದ ಬೆಂಡು ಮಕ್ಕಳ ಆಟಿಕೆಗಳ ತಯಾರಿಕೆಗೆ ಒದಗುತ್ತದೆ.

ಜಿಲ್ಲೆಯಲ್ಲಿ ಹತ್ತಿಯು ಕೃಷಿಗೆ ಗಮನವಿತ್ತು ಹತ್ತಿ ಬಟ್ಟೆಗಳ ತಯಾರಿಕೆಗೆ ಆಸ್ಪದ ಮಾಡಿಕೊಡಬಹುದಾಗಿದೆ. ವಸ್ತ್ರೋದ್ಯಮ ಜಿಲ್ಲೆಯಲ್ಲಿ ಬೆಳೆದಿಲ್ಲವೆನ್ನುವುದು ಸ್ಪಷ್ಟ. ಬಾಗಲಕೋಟೆಗೆ 9 ಕಿ. ಮೀ. ದೂರದಲ್ಲಿನ ಗದ್ದನಕೇರಿ ಎಂಬಲ್ಲಿ ಕ್ಯಾಲ್ಸೈಟ್ ಖನಿಜ ದೊರೆಯುತ್ತದೆನ್ನಲಾಗಿದೆ. ಇದು ಗಾಜು ಮತ್ತಿತರ ಕೈಗಾರಿಕೆಗಳಲ್ಲಿ ಒದಗುತ್ತದೆ. ಕ್ಯಾಲ್ಸೈಟ್ ತೆಗೆಯುವಿಕೆ ಒಂದು ಕೈಗಾರಿಕೆಯಾಗಿ ರೂಪುಗೊಳ್ಳಬಹುದು. ಅಂತೆಯೇ ತಾಮ್ರ ಸಿಗುವ ಬಗ್ಗೆ ಪರಿಶೋಧನೆಯನ್ನು ಕೈಗೊಳ್ಳಬಹುದು. ಜಿಲ್ಲೆಯಲ್ಲಿ ಗಣಿ ಉದ್ಯಮವನ್ನು ಅಭಿವೃದ್ಧಿಗೊಳಿಸಲು ಅವಕಾಶವಿದೆ. ಗಾಜಿನ ತಯಾರಿಕೆ ಆಸ್ಪದ ಕೊಡಬಹುದಾಗಿದೆ. ಕತ್ತಾಳೆ ನಾರಿನ ಗಿಡದ ಕೃಷಿಯನ್ನು ಹೆಚ್ಚಿಸಿ ಕತ್ತಾಳೆ ನಾರಿನಿಂದ ಅನೇಕ

ಪ್ರಯೋಜನಗಳನ್ನು ಪಡೆಯಬಹುದಾಗಿದೆ. ಆಲಮಟ್ಟಿ ಅಣೆಕಟ್ಟು ವಿದ್ಯುದಾಗಾರ ಮತ್ತಿತರ ಯೋಜಿತ ವಿದ್ಯುದಾಗಾರಗಳ ನಿರ್ಮಾಣದಿಂದ ಕೈಗಾರಿಕೆ ಬೆಳಸಿಗೆ ವಿಶೇಷ ಉತ್ತೇಜನ ಸಿಗಲಿವೆ. ವಿದ್ಯುಚ್ಛಕ್ತಿ ಉತ್ಪಾದನೆ ಹೆಚ್ಚಿದ ಬಳಿಕ ಕೈಗಾರಿಕೆಗಳನ್ನು ಮತ್ತಷ್ಟು ರೂಪಿಸಬಹುದಾಗಿದೆ. ಮಿನಿ ಸಿಮೆಂಟ್ ಕಾರ್ಖಾನೆಗಳನ್ನೂ ಸ್ಥಾಪಿಸುವ ಅಗತ್ಯವಿದ್ದು ಅದಕ್ಕೆ ಬೇಕಾದ ಅನುಕೂಲಗಳು ಜಿಲ್ಲೆಯಲ್ಲಿವೆ. ಬೆಂಗಳೂರಿನಿಂದ ಬಿಜಾಪುರಕ್ಕೆ ರಸ್ತೆ ಹಾಗೂ ರೈಲುಮಾರ್ಗ ಸೌಕರ್ಯಗಳಿದ್ದು ಕೈಗಾರಿಕೆಗಳಿಗೆ ಬೇಕಾದ ವಸ್ತುಗಳನ್ನು ದೊರಕಿಸಿಕೊಡಲು ಅವಕಾಶವಿದೆ.

## ತರಬೇತಿ ಕೇಂದ್ರಗಳು ಮತ್ತು ಕೈಗಾರಿಕಾ ಪ್ರದೇಶಗಳು

ಬಿಜಾಪುರ ಮತ್ತು ಬಾಗಲಕೋಟೆಗಳಲ್ಲಿ ಕಸಬುದಾರರ ತರಬೇತಿ ಸಂಸ್ಥೆಗಳಿವೆ. ಬಡಗಿ, ಕಮ್ಮಾರ ಕೆಲಸ, ಚರ್ಮದ ಹೊಲಿಗೆ, ಉಣ್ಣೆ ಕಂಬಳಿ ತಯಾರಿಕೆ, ತೆಂಗಿನನಾರು ಮತ್ತು ಹಗ್ಗಗಳ ತಯಾರಿಕೆ, ಹತ್ತಿ ನೇಯ್ಗೆ ಕುರಿತು ಇಲ್ಲಿ ತರಬೇತಿ ಶಿಕ್ಷಣವನ್ನು ನೀಡಲಾಗುತ್ತಿದೆ. ಕಸಬುದಾರರಿಗೆ ಇದೊಂದು ಅವಕಾಶವಾದರೂ ಇಲ್ಲಿ ತರಬೇತಿ ಪಡೆಯುವವರಿಗೆ ನೀಡಲಾಗುವ ಕಡಿಮೆ ಮಾಸಿಕ ವೇತನದಿಂದಾಗಿ ಶಿಕ್ಷಣ ಪಡೆಯಲು ಬರುವವರು ಕಡಿಮೆ. ಮಾಸಿಕ ವೇತನವನ್ನು ಹೆಚ್ಚಿಸಿ ತರಬೇತಿ ಸೌಲಭ್ಯವನ್ನು ಕಲ್ಪಿಸುವುದು ಅವಶ್ಯ. ಇದೇ ರೀತಿ ಬಿಜಾಪುರದಲ್ಲಿ ವೆಲ್ಡಿಂಗ್, ಫಿಟ್ಟರ್, ಮೆಷಿನಿಸ್ಟ್, ವೈರ್‌ಮ್ಯಾನ್, ಟರ್ನರ್, ಎಲೆಕ್ಟ್ರಿಷಿಯನ್ ಈ ವೃತ್ತಿಗಳ ಬಗ್ಗೆ ಶಿಕ್ಷಣವನ್ನು ನೀಡಲಾಗುತ್ತಿದೆ. ಕೈಗಾರಿಕೆಗಳಲ್ಲಿ ಈ ತರಬೇತಿ ಪಡೆದವರ ಅವಶ್ಯಕತೆ ಇರುತ್ತದೆ.

ಬಿಜಾಪುರ ಜಿಲ್ಲೆಯಲ್ಲಿ ಬಿಜಾಪುರ, ಬಾಗಲಕೋಟೆ ಹಾಗೂ ಜಮಖಂಡಿ ತಾಲ್ಲೂಕುಗಳನ್ನು ಕೈಗಾರಿಕೆ ಅಭಿವೃದ್ಧಿಗಾಗಿ ಗುರುತಿಸಲಾಗಿದೆ. ಉಳಿದ ತಾಲ್ಲೂಕುಗಳು ಕೈಗಾರಿಕೆಗಳ ದೃಷ್ಟಿಯಿಂದ ಹಿಂದುಳಿದ ಪ್ರದೇಶಗಳು. ಬಿಜಾಪುರದಲ್ಲಿ ಕೈಗಾರಿಕಾ ಎಸ್ಟೇಟ್ ಇದೆ. ಜಮಖಂಡಿ ತಾಲ್ಲೂಕಿನ ಬನಹಟ್ಟಿ ಮತ್ತು ಆಸಂಗಿ, ಮುಧೋಳ, ಹುನಗುಂದ ತಾಲ್ಲೂಕಿನ ತಂಡಿಹಾಳ, ಬಾಗೇವಾಡಿ ತಾಲ್ಲೂಕಿನ ನಿಡಗುಂಡಿ, ಮುಧೋಳ ತಾಲ್ಲೂಕಿನ ಮಹಾಲಿಂಗಪುರ, ಬಿಜಾಪುರ ಇವುಗಳನ್ನು ಕೈಗಾರಿಕಾ ಪ್ರದೇಶಗಳೆಂದು ಘೋಷಿಸಲಾಗಿದೆ. ಬಿಜಾಪುರದಲ್ಲಿ ಚರ್ಮೋದ್ಯಮಕ್ಕೆ ಅವಕಾಶ ಮಾಡಿ ಕೊಡಲಾಗಿದೆ.

## ಬ್ಯಾಂಕುಗಳು ಮತ್ತಿತರ ಅನುಕೂಲಗಳು

ಯಾವುದೇ ಪ್ರದೇಶದಲ್ಲಿ ಕೈಗಾರಿಕೆಗಳು ಅಭಿವೃದ್ಧಿಯಾಗಬೇಕಾದರೆ ಹಣದ ನೆರವು ತೀರಾ ಅಗತ್ಯವಾಗುತ್ತದೆ. ಜೊತೆಗೆ ಕೈಗಾರಿಕೆಗಳನ್ನು ಸ್ಥಾಪಿಸಲು ಸೂಕ್ತ ಮಾರ್ಗದರ್ಶನ ಬೇಕಾಗುತ್ತದೆ. ಕರ್ನಾಟಕದಲ್ಲಿ ರಾಜ್ಯ ಕೈಗಾರಿಕಾ ಮತ್ತು ವಾಣಿಜ್ಯ ನಿರ್ದೇಶನಾಲಯ, ಸಣ್ಣ ಪ್ರಮಾಣದ ಕೈಗಾರಿಕೆಗಳ ಅಭಿವೃದ್ಧಿ ನಿಗಮ, ಹಣಕಾಸು ನಿಗಮ ಇವುಗಳು ಕೈಗಾರಿಕೆಗಳ ಸ್ಥಾಪನೆಯ ವಿಷಯದಲ್ಲಿ ಸಲಹೆ ಅವಕಾಶಗಳನ್ನು ನೀಡುತ್ತವೆ. ಆಯಾ ಜಿಲ್ಲೆಗಳಲ್ಲಿ ಕೈಗಾರಿಕಾ ನಿರ್ದೇಶನಾಲಯವು ಜಿಲ್ಲಾ ಕೇಂದ್ರ ಹಾಗೂ ಉಪಕೇಂದ್ರಗಳನ್ನು ತೆರೆದಿದೆ.

ಜಿಲ್ಲೆಯಲ್ಲಿನ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್, ಎಲ್ಲಾ ಪ್ರಾಥಮಿಕ ಪತ್ತಿನ ಸಹಕಾರಿ ಸಂಘಗಳಿಗೆ ಧನಸಹಾಯ ನೀಡುತ್ತದೆ. ಬಾಗಲಕೋಟೆಯಲ್ಲಿ ಜಿಲ್ಲಾ ಕೈಗಾರಿಕಾ ಸಹಕಾರ ಬ್ಯಾಂಕ್

ಇದೆ. ಮಧ್ಯಮ ವರ್ಗದ ಜನರಿಗೆ ನೆರವು ನೀಡುವಂತಹ ಅರ್ಬನ್ ಕೋ ಆಪರೇಟೀವ್ ಬ್ಯಾಂಕುಗಳು ಮತ್ತು ಸೊಸೈಟಿಗಳೂ ಇರುತ್ತವೆ. ಬಾಗಲಕೋಟೆ, ಬಿಜಾಪುರ, ಜಮಖಂಡಿ ಮತ್ತು ಮುಧೋಳದಲ್ಲಿರುವ ಈ ಬ್ಯಾಂಕುಗಳು ಸಾಲದ ಸೌಲಭ್ಯಗಳನ್ನು ಕಲ್ಪಿಸಿವೆ. ವ್ಯವಸಾಯಗಾರರಿಗೆ ಮತ್ತು ಭೂಮಿ ಇಲ್ಲದ ಕಾರ್ಮಿಕರಿಗೆ ನೆರವು ನೀಡುವ ಗ್ರಾಮೀಣ ಬ್ಯಾಂಕುಗಳೂ ಇವೆ. ಇರುವ ಅನುಕೂಲಗಳನ್ನು ಕೈಗಾರಿಕೆಗಳ ಸ್ಥಾಪನೆಗೆ ಉಪಯೋಗಿಸಿಕೊಳ್ಳುವ ಜನ ಬೇಕಾಗುತ್ತಾರೆ. ಕೈಗಾರಿಕೆಗಳು ಬೆಳೆಯಲು ಆಗ ಸಾಧ್ಯವಾಗುತ್ತದೆ. ಬಿಜಾಪುರ ಜಿಲ್ಲೆ ತಾನು ಬೆಳೆಯುವ, ಉತ್ಪಾದಿಸುವ ವಸ್ತುಗಳನ್ನೂ ಹೊರದೇಶ ಹಾಗೂ ರಾಜ್ಯಗಳಿಗೆ ರಫ್ತು ಮಾಡುತ್ತದೆ. ಹತ್ತಿ, ಕಡಲೆಕಾಯಿ, ಸಿಮೆಂಟ್, ಕುಸುಬೆ. ಎಳ್ಳು, ಜೋಳ, ಸಜ್ಜೆ, ಗೋದಿ, ಸೀರೆ ಕಣಗಳು ಮತ್ತು ಸ್ಲೇಟುಗಳು ಇವು ರಫ್ತಾಗುವ ವಸ್ತುಗಳು. ಯಂತ್ರ ಉತ್ಪನ್ನ ವಸ್ತುಗಳು ಮತ್ತು ಕೆಲವು ಕೃಷಿ ಉತ್ಪಾದನೆಗಳನ್ನು ಜಿಲ್ಲೆಯು ಹೊರಗಡೆಯಿಂದ ತರಿಸಿಕೊಳ್ಳುತ್ತದೆ. ತೇಗ, ಪದರಹಲಗೆ, ಮತ್ತಿಮರ, ಕಬ್ಬಿಣದ ವಸ್ತುಗಳು, ರೇಷ್ಮೆನೂಲು, ತೆಂಗಿನ ಕಾಯಿ, ಅಡಿಕೆ ಮೊದಲಾದವನ್ನೂ ಆಮದು ಮಾಡಿಕೊಳ್ಳುತ್ತವೆ. ಇತರ ಹಲವಾರು ವಾಣಿಜ್ಯ ಬ್ಯಾಂಕುಗಳು ಜಿಲ್ಲೆಯಲ್ಲಿರುತ್ತವೆ. ಇವು ಸಣ್ಣ ಪ್ರಮಾಣದ ಕೈಗಾರಿಕೆಗಳ ಅಭಿವೃದ್ಧಿಗೆ ಸಹಾಯ ಮಾಡುತ್ತವೆ.

## ಪ್ರವಾಸೋದ್ಯಮ

ಬಿಜಾಪುರ ಐದು ನದಿಗಳ ಜಿಲ್ಲೆ. ಬಿಜಾಪುರ ಜಿಲ್ಲೆಯನ್ನು ಕರ್ನಾಟಕದ ಪಂಜಾಬ್ ಎನ್ನಬಹುದು. ಬಿಜಾಪುರ ಒಂದು

ಸಾಂಸ್ಕೃತಿಕ ನಗರ. ಬಿಜಾಪುರ ನಗರದಲ್ಲಿ ನೋಡಬೇಕಾದುದು ಬಹಳ. ಇಲ್ಲಿನ ಗೋಳಗುಮ್ಮಟ ಒಂದು ಅದ್ಭುತ. ಇತರ ಮಹಮ್ಮದೀಯ ವಾಸ್ತುಶಿಲ್ಪದ ಕಟ್ಟಡಗಳು ಪ್ರವಾಸಿಗರನ್ನು ಬೆರಗುಗೊಳಿಸುತ್ತವೆ. ಬಿಜಾಪುರ ಜಿಲ್ಲೆಯ ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳು ಕನ್ನಡನಾಡಿನ ವಾಸ್ತುಶಿಲ್ಪವನ್ನು ಜಗತ್ತಿಗೆ ಪರಿಚಯ ಮಾಡಿಸುತ್ತವೆ. ಬಾದಾಮಿ ಗುಹಾಂತರ್ದೇವಾಲಯ ಗಳು ಪ್ರವಾಸಿಗರನ್ನು ತಣಿಸುತ್ತವೆ. ಜಿಲ್ಲೆಯಲ್ಲಿ ಹಲವಾರು ಯಾತ್ರಾಸ್ಥಳಗಳೂ ಇವೆ.

ಬಾದಾಮಿ, ಐಹೊಳೆ, ಬಿಜಾಪುರ, ಇಲ್ಲೆಲ್ಲ ಪ್ರವಾಸಿಗರಿಗೆ ಅಗತ್ಯವಾದ ಅನುಕೂಲಗಳನ್ನೇರ್ಪಡಿಸಬೇಕಾದುದು ಅವಶ್ಯ



ವಿರೂಪಾಕ್ಷ ದೇವಾಲಯ, ಪಟ್ಟದ ಕಲ್ಲು

